ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಇಂದು ಮಾನವರು ಜಗತ್ತಿನಾದ್ಯಂತ ಉಚ್ಚ-ನೀಚ, ಮೇಲು-ಕೀಳು, ಸುವರ್ಣ-ಅವರ್ಣ, ಕರಿಯ-ಬಿಳಿಯ, ದೇಶಿ-ವಿದೇಶಿ, ತನ್ನವ-ಪರಕೀಯ ಎಂಬ ಭೇದ ಭಾವಗಳಿಂದಾಗಿ ಪರಸ್ಪರ ಹೊಡೆದಾಡಿಕೊಳ್ಳುತ್ತಿದ್ದಾರೆ. ಮಾನವರ ಮಧ್ಯೆ ಅಂತರ ಹೆಚ್ಚಾಗುತ್ತಿದೆ. ಜನಾಂಗ-ರಾಷ್ಟ್ರಗಳ ಮಧ್ಯೆ ದ್ವೇಷ, ಅಸೂಯೆ, ಅಸಹನೆ ಬೆಳೆಯುತ್ತಿದೆ. ಇದರಿಂದಾಗಿ ಜಗತ್ತು ಮೂರನೆಯ ಮಹಾ ಯುದ್ಧದ ಹೊಸ್ತಿಲಲ್ಲಿರುವಂತೆ ಭಾಸವಾಗುತ್ತಿದೆ. ಮಾನವನು ತನ್ನನ್ನು ತಾನೇ ವಿನಾಶದ ಕೂಪಕ್ಕೆ ತಳ್ಳುತ್ತಿದ್ದಾನೆ.

ಮಾನವ ಹೃದಯಗಳನ್ನು ಜೋಡಿಸಲು, ಅವರೊಳಗೆ ಪ್ರೇಮ, ಅನುಕಂಪ, ಸಹಾನುಭೂತಿ ಮತ್ತು ಪರಸ್ಪರ ಸಹಕಾರ ಮನೋಭಾವ ಬೆಳೆಸಲು ಅನೇಕ ಸಿದ್ಧಾಂತಗಳು ಜನ್ಮತಾಳಿವೆ. ಆದರೆ ಯಾವುದೂ ಯಶಸ್ಸು ಕಾಣಲಿಲ್ಲ. ಸಮಗ್ರ ಮಾನವೀಯತೆ ಮತ್ತು ಸಹೋದರತೆಯ ಕಲ್ಪನೆಯು ಮರೀಚಿಕೆಯಾಗಿಯೇ ಉಳಿದಿದೆ.

ಇಂತಹ ಪರಿಸ್ಥಿತಿ, ಅಲ್ಲ-ಇದಕ್ಕಿಂತಲೂ ಹೀನ ಪರಿಸ್ಥಿತಿಯಲ್ಲಿ ಜಗತ್ತು ಹದಿನಾಲ್ಕು ಶತಮಾನಗಳ ಹಿಂದೆ ಸಿಲುಕಿತ್ತು. ದೇವ ನಿರ್ಣಯಿತ ಸಿದ್ಧಾಂತವೊಂದು ಆ ಪರಿಸ್ಥಿತಿಯನ್ನು ಆಮೂಲಾಗ್ರವಾಗಿ ಬದಲಿಸಿತು. ಅದುವೇ ಇಸ್ಲಾಮ್. ಮಾನವ ನಿರ್ಮಿತ ಎಲ್ಲ ಅಂತರಗಳನ್ನೂ ಅದು ಹೋಗಲಾಡಿಸಿತು. ವರ್ಗ-ವರ್ಣ-ಭೇದಗಳು ಶಾಶ್ವತವಾಗಿ ಅಳಿದು ಹೋದುವು. ಹೃದಯಗಳು ಬೆಸೆಯಲ್ಪಟ್ಟುವು. ಎಲ್ಲೆಡೆ ಶಾಂತಿ ಸುಭಿಕ್ಷೆ ನೆಲೆಸಿತು.

ಪ್ರಸ್ತುತ ಸಿದ್ಧಾಂತವು ಇಂದಿಗೂ ಪ್ರಸ್ತುತವಾಗಿದೆ. ಇದು ಸಾಕ್ಷಾತ್ಕಾರಗೊಳ್ಳಬೇಕಾದರೆ ಅಧ್ಯಯನ ಅಗತ್ಯ. ವಾಚಕರ ಕೈಯಲ್ಲಿರುವ 'ಮಾನವ ಕುಲದ ಏಕತೆ' ಎಂಬ ಈ ಕಿರು ಹೊತ್ತಗೆಯು ಪ್ರಸ್ತುತ ವಾಸ್ತವಿಕತೆಗಳ ಕಡೆಗೆ ಗಮನ ಹರಿಸಲು ನಡೆಸಿದ ಪ್ರಯತ್ನವಾಗಿದೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

"ಜನರೇ, ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಒಬ್ಬ ಸ್ತ್ರೀಯಿಂದ ಉಂಟು ಮಾಡಿದೆವು. ತರುವಾಯ ನೀವು ಪರಸ್ಪರ ಪರಿಚಯಪಟ್ಟುಕೊಳ್ಳಲಿಕ್ಕಾಗಿ ನಿಮ್ಮ ಜನಾಂಗಗಳನ್ನೂ ಗೋತ್ರ ಗಳನ್ನೂ ಮಾಡಿದೆವು. ನಿಮ್ಮ ಪೈಕಿ ಅತ್ಯಧಿಕ ಧರ್ಮ ನಿಷ್ಠನೇ ವಾಸ್ತವದಲ್ಲಿ ಅಲ್ಲಾಹನ ಬಳಿ ಅತಿ ಹೆಚ್ಚು ಗೌರವಕ್ಕೆ ಪಾತ್ರನು. ನಿಶ್ಚಯವಾಗಿಯೂ ಅಲ್ಲಾಹನು ಸರ್ವಜ್ಞನೂ ವಿವರಪೂರ್ಣನೂ ಆಗಿರುತ್ತಾನೆ."

(ಪವಿತ್ರ ಕುರ್‌ಆನ್, 49:13)

# ಮಾನವ ಕುಲದ ಏಕತೆ

**ಭೂತ**, ವರ್ತಮಾನ ಮತ್ತು ಭವಿಷ್ಯತ್ ಕಾಲದ ಎಲ್ಲಾ ಮನುಷ್ಯರನ್ನು ಒಂದೆಡೆ ಸೇರಿಸಿ ತಮ್ಮ ಭಾವನೆ ಮತ್ತು ಸಂವೇದನೆಗಳ ಕುರಿತು ಮತ್ತು ಜೀವನಾವಶ್ಯಕತೆಗಳ ಹಾಗೂ ಅನಿವಾರ್ಯ ಬೇಡಿಕೆಗಳ ಕುರಿತು ಪ್ರಶ್ನಿಸಲಾದರೆ ಎಲ್ಲರಿಂದಲೂ ಸಮಾನವಾದ ಉತ್ತರ ದೊರಕಬಹುದು. ಸಂತೋಷ, ದುಃಖ, ಸಹನೆ-ಸಂತಾಪಗಳಂತಹ ಭಾವನೆಗಳಿಂದ ಮತ್ತು ಮಾನವ ಸಹಜವಾದ ಬೇಡಿಕೆಗಳಿಂದ ಮುಕ್ತರಾದ ಅಥವಾ ಇತರೆಲ್ಲರಿಗಿಂತ ಭಿನ್ನವಾದ ಭಾವನೆಗಳನ್ನು ಹೊಂದಿದ ಯಾರೂ ಮಾನವರ ಪೈಕಿ ಸಿಗಲಾರರು. ಇವುಗಳ ಹೊರತಾಗಿಯೂ ಮಾನವ ವಿವಿಧ ಜಾತಿ ಮತ್ತು ಕುಲದ ಹೆಸರಲ್ಲಿ ಪರಸ್ಪರ ಜಗಳ ಕಾಯುವುದನ್ನು ಕಂಡರೆ ವ್ಯಕ್ತಿ ಮತ್ತು ಜನಾಂಗಗಳ ಭಾವನೆಗಳು ಮತ್ತು ಜೀವನಾವಶ್ಯಕತೆಗಳು ಪರಸ್ಪರ ಭಿನ್ನವಾಗಿದೆಯೋ ಎಂದು ಭಾಸವಾಗುತ್ತದೆ. ಆಫ್ರಿಕಾ ಖಂಡದ ನಿವಾಸಿಗಳು ಯಾವ ವಸ್ತುಗಳನ್ನು ಜೀವನಾವಶ್ಯಕ ವಸ್ತುಗಳೆಂದು ಪರಿಗಣಿಸುತ್ತಾರೋ ಅಮೇರಿಕಾದ ನಿವಾಸಿಗಳು ಅವುಗಳಿಂದ ಸಂಪೂರ್ಣ ನಿರಪೇಕ್ಷಿತರಾಗಿರುತ್ತಾರೆ. ಐರೋಪ್ಯನ್ನರ ಮೂಲ ಬೇಡಿಕೆಗಳು ಆಫ್ರಿಕನ್ನರ ಮೂಲ ಬೇಡಿಕೆಗಳಿಗಿಂತ ಭಿನ್ನವಾಗಿದೆ. ರೋಮನ್ನರು ಗ್ರೀಕರಿಂದ ಭಿನ್ನವಾದ ಭಾವನೆಗಳನ್ನು ಹೊಂದಿದವರಾಗಿರುತ್ತಾರೆ ಎಂದು ಭಾಸವಾಗುತ್ತದೆ.

## ಮಾನವ ಬದುಕಿಗೊಂದು ಧ್ಯೇಯವಿರಬೇಕು

ಪ್ರಾಕೃತಿಕ ಬೇಡಿಕೆಗಳು ಮತ್ತು ನೈಸರ್ಗಿಕ ಭಾವನೆಗಳ ಆಧಾರದಲ್ಲಿ ಸಮಸ್ತ ಮಾನವಕುಲ ಒಂದಾಗಿರುವಾಗ ಅವರನ್ನು ಪರಸ್ಪರರ ಮೇಲೆ ಎತ್ತಿಕಟ್ಟುವಂತೆ

ಮಾಡಿಸುವ, ಒಬ್ಬರು ಇನ್ನೊಬ್ಬರಿಗೆ ನಷ್ಟವನ್ನುಂಟು ಮಾಡುವಂತೆ ಪ್ರೇರೇಪಿಸುವ ಮತ್ತು ಪರಸ್ಪರ ರಕ್ತ ಹರಿಸುವಂತೆ ಮಾಡುವ ಅಂಶವಾದರೂ ಏನು ಎಂಬುದು ಒಂದು ಕುತೂಹಲದ ಪ್ರಶ್ನೆಯಾಗಿದೆ. ವಾಸ್ತವದಲ್ಲಿ ಮಾನವ ಈ ಲೋಕದಲ್ಲಿ ತನ್ನ ಬದುಕಿಗೆ ಒಂದು ಧ್ಯೇಯವಿರಬೇಕೆಂದು ಬಯಸುತ್ತಾನೆ. ಆ ಧ್ಯೇಯವು ಆತನ ಆಸೆ ಆಕಾಂಕ್ಷೆಗಳ ಕೇಂದ್ರವಾಗಿರುತ್ತದೆ. ಆದಕ್ಕೋಸ್ಕರ ಆತನು ತನ್ನೆಲ್ಲಾ ಶಕ್ತಿ ಸಾಮರ್ಥ್ಯಗಳನ್ನು ಅರ್ಪಿಸುತ್ತಾನೆ. ತನ್ನ ಅಮೂಲ್ಯವಾದ ಸಮಯ ಮತ್ತು ಪ್ರಾಣವನ್ನು ಬಲಿ ನೀಡುತ್ತಾನೆ. ಅದರ ಸಾಧನೆಯಲ್ಲಿ ಆತ ನೆಮ್ಮದಿಯನ್ನು ಕಾಣುತ್ತಾನೆ. ಇಂತಹ ಒಂದು ಧ್ಯೇಯವಿಲ್ಲದೆ ಆತ ನೆಮ್ಮದಿಯನ್ನು ಹೊಂದುವುದಂತಿರಲಿ, ಬದುಕಿಯೂ ಇರಲಾರನು. ಬದುಕಿನಲ್ಲಿ ಇಂತಹ ಒಂದು ಧ್ಯೇಯವನ್ನು ಹೊಂದಿಕೊಳ್ಳುವುದರ ಕುರಿತು ಮಾನವರ ಮಧ್ಯೆ ಭಿನ್ನಾಭಿಪ್ರಾಯಗಳಿದ್ದವು. ಆ ಭಿನ್ನಾಭಿಪ್ರಾಯಗಳೇ ಮಾನವರ ಮಧ್ಯೆ ಒಡುಕುಗಳಿಗೆ ಮೂಲ ಕಾರಣವಾಯಿತು.

## ಬದುಕಿನ ತಪ್ಪು ಧ್ಯೇಯಗಳು

ಯಾರೋ ಹೇಳಿದರು, "ಕುಟುಂಬ ಅಥವಾ ಗೋತ್ರದ ಸೇವೆ ಮಾಡುವುದು ಮಾನವ ಬದುಕಿನ ಉದ್ದೇಶವಾಗಿರುತ್ತದೆ. ಗೋತ್ರದ ಲಾಭಕ್ಕಾಗಿ ಶ್ರಮಿಸುವುದು, ಅದಕ್ಕೆ ರಕ್ಷಣೆ ಒದಗಿಸುವುದು, ವೈರಿಗಳಿಂದ ಗೋತ್ರವನ್ನು ಕಾಪಾಡುವುದೇ ಮೊದಲಾದವು ಮಾನವನ ಪವಿತ್ರ ಕರ್ತವ್ಯವಾಗಿರುತ್ತದೆ. ಕಾರಣ ಗೋತ್ರವು ಮಾನವನಿಗೆ ಅಸ್ತಿತ್ವವನ್ನು ನೀಡಿದೆ. ಅವನನ್ನು ಸುಶಕ್ತನಾಗಿ ಮಾಡಿದೆ. ಈತನ ಎಲ್ಲಾ ಶಕ್ತಿ ಸಾಮರ್ಥ್ಯಗಳು ಮೂಲತಃ ಗೋತ್ರದ ಔದಾರ್ಯದ ಪರಿಣಾಮವಾಗಿ ಲಭಿಸಿವೆ. ಹೀಗಿರಲು ಮಾನವ ತನ್ನ ಶಕ್ತಿ ಸಾಮರ್ಥ್ಯಗಳನ್ನು ತನ್ನ ಗೋತ್ರದ ಲಾಭಕ್ಕಾಗಿ ವಿನಿಯೋಗಿಸಬೇಕು. ಹೀಗೆ ಯಾರು ಅವುಗಳನ್ನು ತನ್ನ ಗೋತ್ರದ ಲಾಭಕ್ಕಾಗಿ ವಿನಿಯೋಗಿಸುತ್ತಾನೋ ಆತನು ಬದುಕಿನಲ್ಲಿ ಯಶಸ್ಸು ಸಾಧಿಸುತ್ತಾನೆ."

ವಾಸ್ತವದಲ್ಲಿ ಮಾನವನಲ್ಲಿರುವ ಶಕ್ತಿ ಸಾಮರ್ಥ್ಯಗಳೆಲ್ಲ ಕೇವಲ ಆತನು ಹುಟ್ಟಿ ಬೆಳೆದ ಗೋತ್ರದಿಂದ ಒದಗಿ ಬಂದವುಗಳಲ್ಲ, ಆತನ ಬೆಳವಣಿಗೆ ಮತ್ತು ಅಭಿವೃದ್ಧಿಯಲ್ಲಿ ಆತನ ಗೋತ್ರದಂತೆ ಸಮಾಜದ ಇತರ ಕುಟುಂಬ ಮತ್ತು

ಗೋತ್ರಗಳ ಪಾತ್ರವೂ ಸೇರಿದೆ. ಆದುದರಿಂದ ಮಾನವ ಕೇವಲ ತನ್ನ ಗೋತ್ರದ ಕುರಿತು ಚಿಂತಿಸುವುದು ಮತ್ತು ಅದರ ಲಾಭಕ್ಕಾಗಿ ಮಾತ್ರ ಶ್ರಮಿಸುವುದು ಸರಿಯಲ್ಲ, ಅವನ ಸೇವೆಯು ತನ್ನ ಗೋತ್ರಕ್ಕೆ ಸಂಬಂಧಪಟ್ಟವರಿಗೆ ಮಾತ್ರ ಸೀಮಿತಗೊಳ್ಳದೆ ಒಂದೇ ಭಾಷೆಯನ್ನು ಆಡುವ ಇತರ ಗೋತ್ರಗಳನ್ನೂ ತಲುಪುವಂತಾಗಬೇಕು. ಭಾಷೆಯು ವಿಭಿನ್ನ ಗೋತ್ರಗಳನ್ನು ಜೋಡಿಸುವ ಮಾಧ್ಯಮವಾಗಿದೆ. ಭಾಷೆಯಿಂದ ಭಾವನೆಗಳಲ್ಲಿ ಸಮಾನತೆ ಬೆಳೆಯುತ್ತದೆ, ಇದರಿಂದ ಗೋತ್ರಗಳು ಪರಸ್ಪರ ಹತ್ತಿರ ವಾಗುತ್ತವೆ. ಅವು ಪರಸ್ಪರ ಸಹಾಯಕವಾಗಿ ಮಾರ್ಪಡುತ್ತವೆ.

ಆದರೆ ಕೆಲವೊಮ್ಮೆ ನೂರಾರು ಮೈಲುಗಳ ಅಂತರವು ಭಾಷೆಯ ವ್ಯಾಪ್ತಿಯನ್ನೂ ಕೊನೆಗೊಳಿಸಿ ಬಿಡುತ್ತದೆ. ಮಾನವನ ಲಾಭದ ವಲಯವು ಭಾಷೆಯ ವ್ಯಾಪ್ತಿ ಗಿಂತಲೂ ದೂರ ವ್ಯಾಪಿಸಿದೆ. ಈ ನಿಟ್ಟಿನಲ್ಲಿ ಆತನು ಇತರ ಭಾಷೆಯನ್ನಾಡುವ ವ್ಯಕ್ತಿ ಮತ್ತು ಸಮುದಾಯದೊಂದಿಗೆ ಸಂಬಂಧವನ್ನು ಬೆಳೆಸಿಕೊಳ್ಳಲು ನಿರ್ಬಂಧಿತ ನಾಗುತ್ತಾನೆ. ಆದರೆ ಆತನ ಸಂಬಂಧವು ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕವಾಗಿ ಗಾಢ ಸಂಬಂಧ ಹೊಂದಿದವರೊಂದಿಗೆ ಮತ್ತು ಆಪ್ತರೊಂದಿಗೆ ಮಾತ್ರ ಸೀಮಿತವಾಗಿ ರುತ್ತದೆ. ಈ ಸಂಬಂಧವು ಸಾಮಾನ್ಯವಾಗಿ ಭೌಗೋಳಿಕವಾಗಿ ವ್ಯತ್ಯಾಸಗೊಂಡ ಮತ್ತು ಸಮಾನ ವಾದ ಹವಾಮಾನ ಮತ್ತು ವಾಯುಗುಣ ವಿರುವ ಬೆಟ್ಟ-ಗುಡ್ಡಗಳಲ್ಲಿ, ನದಿ-ಸಮುದ್ರಗಳ ತೀರದಲ್ಲಿ ವಾಸಿಸುವ ಜನರಲ್ಲಿ ಕಂಡುಬರುತ್ತದೆ. ಮಾನವ ಸಮಸ್ತ ಭೂಮಿ ಮತ್ತು ಅದರಲ್ಲಿರುವ ಪ್ರತಿಯೊಂದು ವಸ್ತುವಿನಿಂದ ಪ್ರಯೋಜನ ಪಡೆಯುತ್ತಾನೆ. ಅದರಿಂದಲೇ ಆತನ ಸಂಸ್ಕೃತಿ ಮತ್ತು ನಾಗರಿಕತೆಗಳು ಬೆಳೆ ಯುತ್ತವೆ. ಆದುದರಿಂದ ಸಮಸ್ತ ವಿಶ್ವವೇ ಅವನ ಕಣ್ಣ ಮುಂದಿರಬೇಕು ಮತ್ತು ಆತನ ಸೇವೆಯು ಜಗತ್ತಿನ ಎಲ್ಲಾ ಜನರನ್ನು ತಲುಪು ವಂತಿರಬೇಕು. ಅಲ್ಲಿ ಹಲವು ಕುಲಗೋತ್ರಗಳು ನೆಲೆಸಿರಬಹುದು. ವಿವಿಧ ವರ್ಣದ ಮತ್ತು ವಿವಿಧ ಭಾಷೆಯನ್ನಾಡುವ ಜನರು ವಾಸ್ತವ್ಯ ಹೂಡಿರಬಹುದು. ವಾಸ್ತವದಲ್ಲಿ ಈ ಸಂಕಲ್ಪವು ನಾಡು ಮತ್ತು ಜನಾಂಗದ ಬುನಾದಿಯಾಗಿವೆ. ಜನಾಂಗೀಯತೆ ಮತ್ತು ರಾಷ್ಟ್ರೀಯತೆಯ ಇನ್ನೂ ಕೆಲವು ಕಾರಣಗಳಿವೆ. ಅವೆಲ್ಲವುಗಳಿಗಿಂತ ಮಿಗಿಲಾಗಿ

ಜನಾಂಗ ಮತ್ತು ರಾಷ್ಟ್ರದ ಸೇವೆ ಹಾಗೂ ಅವರ ಸಂರಕ್ಷಣೆಗಾಗಿ ಮಾಡುವ ಪ್ರಯತ್ನವು ಮನುಷ್ಯನ ಅತಿ ದೊಡ್ಡ ಜೀವನೋದ್ದೇಶವಾಗಿತ್ತು. ಆಧುನಿಕ ಜಗತ್ತು ಕೂಡ ಇದನ್ನು ಅತ್ಯುನ್ನತ ಜೀವನೋದ್ದೇಶವೆಂದು ಪರಿಗಣಿಸುತ್ತದೆ. ತನ್ನ ಸಮುದಾಯ ಮತ್ತು ರಾಷ್ಟ್ರಕ್ಕೋಸ್ಕರ ಜೀವಿಸುವುದು ಮತ್ತು ಸಾಯುವುದು ಅದರ ಪ್ರಕಾರ ಅತ್ಯಂತ ಪುಣ್ಯದಾಯಕ ಕೆಲಸವಾಗಿದೆ. ಯಾರು ಈ ಉದ್ದೇಶಾರ್ಥ ತನ್ನ ಪ್ರಾಣವನ್ನು ಬಲಿನೀಡುತ್ತಾನೋ ಆತನು ಭವಿಷ್ಯದಲ್ಲಿ ಸ್ಮರಣಾರ್ಹ ವ್ಯಕ್ತಿಯೆನಿಸುತ್ತಾನೆ. ಆತನ ನಿಧನವ ಬಳಿಕ ಆತನ ಭಾವಚಿತ್ರದ ಎದುರು ಗೌರವ ಸಲ್ಲಿಸಲಾಗುತ್ತದೆ. ಇತಿಹಾಸ ಪುಟಗಳಲ್ಲಿ ಆತನ ತ್ಯಾಗಶೀಲತೆಯ ಕುರಿತು ಬರೆದಿಡಲಾಗುತ್ತದೆ.

## ಬದುಕಿನ ತಪ್ಪು ಧ್ಯೇಯ ಮಾನವಕುಲದ ವಿಭಜನೆಗೆ ಮೂಲ ಕಾರಣ

ಮೇಲೆ ಪ್ರಸ್ತಾಪಿಸಿದ ಎಲ್ಲಾ ಜೀವನೋದ್ದೇಶಗಳು ಮಾನವರ ಮಧ್ಯೆ ಏಕತೆಯನ್ನು ತರುವ ಬದಲು ಅವರ ಮಧ್ಯೆ ಇನ್ನಷ್ಟು ಒಡಕನ್ನು ಸೃಷ್ಟಿಸುತ್ತವೆ. ಕಾರಣ, ಈ ಪೈಕಿ ಪ್ರತಿಯೊಂದರ ಗುರಿಯು ನಿರ್ದಿಷ್ಟವೂ ಸೀಮಿತವೂ ಆಗಿದೆ. ಅವುಗಳು ನಿರ್ದಿಷ್ಟ ಗುಂಪಿನ ಪ್ರಯೋಜನಾರ್ಥ ಅಸ್ತಿತ್ವಕ್ಕೆ ಬಂದವುಗಳಾಗಿದ್ದು ಆ ಪೈಕಿ ಒಂದೇ ಒಂದು ಧ್ಯೇಯ ಕೂಡಾ ವಿಶ್ವದ ಸಕಲ ಮಾನವರ ಲಾಭದ ಕುರಿತು ಚರ್ಚಿಸುವುದಿಲ್ಲ. ಕೇವಲ ಸೀಮಿತ ಹಾಗೂ ನಿರ್ದಿಷ್ಟ ಉದ್ದೇಶಗಳ ಆಧಾರದಲ್ಲಿ ಮಾನವಕುಲದ ಸರ್ವರನ್ನೂ ಒಟ್ಟುಗೂಡಿಸುವುದು ಅಸಾಧ್ಯದ ಮಾತು. ಒಬ್ಬ ವ್ಯಕ್ತಿಯು ಕೇವಲ ತನ್ನ ಕುಲಗೋತ್ರವನ್ನು ಅತಿಯಾಗಿ ಪ್ರೀತಿಸುತ್ತಿದ್ದು ಇತರರ ಯೋಗಕ್ಷೇಮಗಳ ಕುರಿತು ನಿರಾಸಕ್ತನಾಗಿದ್ದರೆ ಆತನಲ್ಲಿ ಇತರ ಸಮುದಾಯ ಮತ್ತು ಗೋತ್ರಕ್ಕೆ ಸೇರಿದ ಜನರು ಸ್ನೇಹ ಸಂಬಂಧ ಬೆಳೆಸಿಕೊಳ್ಳುವುದಾದರೂ ಹೇಗೆ? ಮಾನವನ ಬದುಕಿನ ಉದ್ದೇಶವು ನಿರ್ದಿಷ್ಟ ವಿಚಾರಗಳಲ್ಲಿ ಸೀಮಿತ ವಾಗಿದ್ದು ಒಬ್ಬನು ಅವುಗಳಿಂದ ಪೂರ್ಣ ಅಪರಿಚಿತನಾಗಿದ್ದರೆ ಮತ್ತು ಅದರಿಂದ ಆತನಿಗೆ ಯಾವುದೇ ರೀತಿಯ ಲಾಭವಿಲ್ಲವೆಂದಾದರೆ ಆ ಜೀವನೋದ್ದೇಶದ ಕಡೆಗೆ ಆತ ಆಕರ್ಷಿತನಾಗುವುದಾದರೂ ಹೇಗೆ?

## ತಪ್ಪು ಧ್ಯೇಯದಿಂದ ಹಗೆತನ ಬೆಳೆಯುತ್ತದೆ

ವಾಸ್ತವದಲ್ಲಿ ಈ ಜೀವನದ ತಪ್ಪು ಧ್ಯೇಯೋದ್ದೇಶಗಳು ಮನುಷ್ಯ ಸಮೂಹದಲ್ಲಿ ಬಿಕ್ಕಟ್ಟನ್ನುಂಟು ಮಾಡಿದೆ. ಅವರ ಮಧ್ಯೆ ಹಗೆತನ ಮತ್ತು ವೈರತ್ವದ ವಿಷಬೀಜವನ್ನು ಬಿತ್ತಿದೆ. ಪ್ರತಿಯೊಬ್ಬನೂ ತನ್ನ ಕುರಿತು ಚಿಂತಿಸುತ್ತಾನೆಯೇ ವಿನಾ ಅನ್ಯರ ಸಮಸ್ಯೆಗಳ ಕುರಿತು ಚಿಂತಿಸುವುದಿಲ್ಲ, ಅವನಿಗೆ ಅದರಲ್ಲಿ ಆಸಕ್ತಿಯೇ ಇಲ್ಲ. ಸರಿಯಾಗಿರಲಿ, ತಪ್ಪಾಗಿರಲಿ ಆತ ತನ್ನ ಸಮುದಾಯದ ಸಂರಕ್ಷಣೆಯನ್ನು ಮಾತ್ರ ತನ್ನ ಕರ್ತವ್ಯ ವೆಂದು ಬಗೆಯುತ್ತಾನೆ. ಅಂತಾರಾಷ್ಟ್ರೀಯ ಸಂಬಂಧಗಳು ಕೂಡ ಇಂದು ವೈಯಕ್ತಿಕ ಲಾಭವನ್ನು ಅವಲಂಬಿಸಿದೆ. ಗುಂಪುಗಳ ನಡುವೆ ತಿಕ್ಕಾಟ, ಸಮುದಾಯಗಳ ಮಧ್ಯೆ ಸಂಘರ್ಷ ಇಂದು ಸಾಮಾನ್ಯವಾಗಿ ಬಿಟ್ಟಿದೆ. ಶಾಂತಿ ನೆಮ್ಮದಿಯ ಬದುಕು ಮಾನವ ಸಮುದಾಯಕ್ಕೆ ಅಪರಿಚಿತವಾಗುತ್ತಿದೆ. ಎಲ್ಲೆಡೆ ಯುದ್ಧಕಾಲಗಳ ಕಾರ್ಮುಗಿಲು ಕವಿದಿದೆ. ಮಾನವ ಇಂದು ತನ್ನ ಮೇಲೆ ಯಾವಾಗ ಬೆಂಕಿಯ ಮಳೆಯು ಸುರಿದು ಸರ್ವನಾಶ ಮಾಡುತ್ತದೋ ಎಂಬ ಭೀತಿಯ ವಾತಾವರಣದಲ್ಲಿ ಬದುಕುತ್ತಿದ್ದಾನೆ.

## ವಿಶ್ವ ಭ್ರಾತೃತ್ವ ಕಲ್ಪನೆ ಮತ್ತು ಅದರ ದೌರ್ಬಲ್ಯ

ಮೇಲೆ ಪ್ರಸ್ತಾಪಿಸಲಾದ ಸಮಸ್ಯೆಗಳ ಪರಿಹಾರಕ್ಕಾಗಿ ಕೆಲವರು ವಿಶ್ವ ಭ್ರಾತೃತ್ವದ ಕಲ್ಪನೆಯನ್ನು ಪ್ರತಿಪಾದಿಸುವುದುಂಟು. ಅಂದರೆ ಎಲ್ಲಾ ವಿಭಾಗದ ಜನರು ತಮ್ಮ ಸಮಾನವಾದ ಹಿತಾಸಕ್ತಿಯ ವಿಚಾರದಲ್ಲಿ ಒಂದಾಗಬೇಕು ಮತ್ತು ಅದನ್ನು ಗಳಿಸುವ ನಿಟ್ಟಿನಲ್ಲಿ ಒಟ್ಟಾಗಿ ದುಡಿಯಬೇಕು. ತಾನೂ ಬದುಕಿ ಇತರರಿಗೂ ಬದುಕುವ ಹಕ್ಕನ್ನು ನೀಡಬೇಕು. ಆದರೆ ಈ ಕಲ್ಪನೆಯು ಕೇವಲ ಭಾವನಾತ್ಮಕವಾಗಿದೆ. ಜಗತ್ತಿನಲ್ಲಿ ಈ ವರೆಗೂ ಈ ಕಲ್ಪನೆಯನ್ನು ಬೆಂಬಲಿಸಲಾಗಿಲ್ಲ, ಜನರ ಎಲ್ಲಾ ನಿರ್ಧಾರಗಳು ಮತ್ತು ಹೆಜ್ಜೆಗಳು ಅವರು ಕಟ್ಟಿಕೊಂಡ ಸಿದ್ಧಾಂತವನ್ನು ಅವಲಂಬಿಸಿವೆ. ಯುದ್ಧ-ಸಂಧಾನಗಳು, ಪ್ರೀತಿ-ಹಗೆತನಗಳು ಕೂಡಾ ಇದೇ ಸಿದ್ಧಾಂತಗಳ ಆಧಾರದಲ್ಲಿ ಉಂಟಾಗುತ್ತದೆ. ಸ್ನೇಹ ಸಂಬಂಧಗಳು ಶಕ್ತವೂ ದುರ್ಬಲವೂ ಆಗುವುದು ಇದರಿಂದಲೇ. ಮಾನವ ಸಿದ್ಧಾಂತಗಳು ಪರಸ್ಪರ ವಿರುದ್ಧವಾದಾಗ ಅಲ್ಲಿ

ಭಿನ್ನಾಭಿಪ್ರಾಯಗಳು ತಲೆದೋರುವುದು ಅನಿವಾರ್ಯ. ಕಮ್ಯೂನಿಝುಮ್‌ನಲ್ಲಿ ನಂಬಿಕೆಯಿರಿಸಿದ ಒಬ್ಬನು ಬಂಡವಾಳಶಾಹಿತ್ವದೊಂದಿಗೆ ಸಂಧಾನ ಮಾಡಿಕೊಳ್ಳಲಾರನು. ತಮ್ಮ ಜನಾಂಗದೊಂದಿಗೆ ಪೂಜ್ಯ ಭಾವನೆ ಹೊಂದಿದ ಜನರು ಜನಾಂಗೀಯತೆಯ ವಿರೋಧಿಯನ್ನು ಸಹಿಸಲಾರರು.

ವೈಚಾರಿಕ ಭಿನ್ನತೆಯ ವಿಚಾರದಲ್ಲಿ ಮಾನವರ ಮಧ್ಯೆ ಜಗಳ-ಕಾಳಗಗಳು ಹಿಂದೆಯೂ ನಡೆಯುತ್ತಿತ್ತು ಎಂದು ಇತಿಹಾಸ ಹೇಳುತ್ತದೆ. ವಾಸ್ತವಿಕತೆ ಹೀಗಿರಲು ಇಂದು ಅದೇ ವಿಚಾರವು ಪ್ರೀತಿ-ಪ್ರೇಮದ ಮಾರ್ಗವಾಗಿ ಪರಿಣಮಿಸುವುದಾದರೂ ಹೇಗೆ? ಈ ಪ್ರಶ್ನೆಯು ಸಾಮಾನ್ಯವಾಗಿದ್ದರೂ ಸಹ ನಾವು ಇದನ್ನು ಕಡೆಗಣಿಸುವಂತಿಲ್ಲ. ವಿಶ್ವ ಭ್ರಾತೃತ್ವ ಕಲ್ಪನೆಯ ಪ್ರತಿಪಾದಕರ ಕಡೆಯಿಂದಲೂ ಈ ಪ್ರಶ್ನೆಗೆ ಈ ವರೆಗೆ ಸಮರ್ಪಕ ಉತ್ತರ ದೊರಕಲಿಲ್ಲ.

## ಮಾನವಕುಲದ ಏಕತೆಯ ಇಸ್ಲಾಮೀ ಬುನಾದಿಗಳು

ಮೇಲಿನ ಪ್ರಶ್ನೆಗೆ ಇಸ್ಲಾಮ್ ಧರ್ಮವು ಸಮರ್ಪಕವಾದ ಉತ್ತರವನ್ನು ನೀಡಿದೆ. ಮಾನವರೆಲ್ಲರೂ ಮೂಲತಃ ಒಂದೇ ಸಮುದಾಯಕ್ಕೆ ಸೇರಿದವರು ಎಂದು ಕೇವಲ ಸಾರಿಬಿಡದೆ ವಸ್ತುನಿಷ್ಠವಾದ ಬುನಾದಿಗಳನ್ನು ಅದು ಒದಗಿಸುತ್ತದೆ. ಮಾನವಕುಲದ ಮೂಲ ಒಂದೇ ಆಗಿದ್ದು ಎಲ್ಲರ ದೇವನು ಒಬ್ಬನೇ ಆಗಿರುತ್ತಾನೆ. ಆದುದರಿಂದ ಮಾನವ ತನ್ನೆಲ್ಲ ಬಾಹ್ಯ ಭಿನ್ನತೆಗಳ ಹೊರತಾಗಿಯೂ ಒಂದೇ ಆಗಿರುತ್ತಾನೆ. ಇಸ್ಲಾಮ್, ಜಗತ್ತನ್ನು ಈ ವಾಸ್ತವಿಕತೆಯ ಕಡೆಗೆ ಆಹ್ವಾನಿಸುತ್ತದೆ. ಈ ತತ್ವವನ್ನು ಪ್ರಚುರ ಪಡಿಸಲು ಮತ್ತು ಅದನ್ನು ಯಶಸ್ವಿಗೊಳಿಸಲು ನಿರಂತರವಾಗಿ ಶ್ರಮಿಸುತ್ತದೆ. ಈ ಮಾರ್ಗದಲ್ಲಿ ಎದುರಾಗುವ ಎಲ್ಲಾ ಪಕ್ಷಪಾತಗಳನ್ನು ದೂರೀಕರಿಸುವುದು ಕಡ್ಡಾಯವೆಂದು ಅದು ಭಾವಿಸುತ್ತದೆ. ಇಸ್ಲಾಮ್ ಧರ್ಮವು ಪ್ರತಿಪಾದಿಸುವ ಈ ಮೂಲಭೂತ ತತ್ವಗಳನ್ನು ಜಗತ್ತು ಒಪ್ಪಿಕೊಂಡಲ್ಲಿ ಭಿನ್ನಾಭಿಪ್ರಾಯಗಳ ಮಧ್ಯೆ ಐಕ್ಯದ ರವಿ ಮೂಡುವ ಹೊಸ ಮುಂಜಾವವನ್ನು ನಿರೀಕ್ಷಿಸಬಹುದು. ಅಂದು ಸಮುದಾಯ ಮತ್ತು ಸಂಘಟನೆಗಳು ಕಚ್ಚಾಟ ನಿಲ್ಲಿಸಿ ಒಂದೇ ಧ್ಯೇಯಕ್ಕಾಗಿ ಒಟ್ಟು ಸೇರಿ ದುಡಿಯುವುದನ್ನು ಕಾಣಬಹುದು.

## ಮಾನವರೆಲ್ಲರೂ ಏಕದೇವನ ದಾಸರು

ಇಸ್ಲಾಮ್ ವಸ್ತುನಿಷ್ಠವಾದ ದೇವ ಕಲ್ಪನೆಯನ್ನು ಹೊಂದಿದ ಧರ್ಮವಾಗಿದೆ. ನಿಜಾರ್ಥದಲ್ಲಿ ಅದುವೇ ಇಸ್ಲಾಮಿ ಶಿಕ್ಷಣದ ಮೂಲ. ಈ ವಾಸ್ತವಿಕತೆಯನ್ನು ಪ್ರಬಲವಾದ ಆಧಾರ ಪ್ರಮಾಣಗಳೊಂದಿಗೆ ಅದು ಜಗತ್ತಿನ ಮುಂದೆ ಸಮರ್ಪಿಸುತ್ತದೆ. ನಮ್ಮ ಊಹೆಗೂ ನಿಲುಕದಷ್ಟು ವಿಶಾಲವೂ ವಿಸ್ತೃತವೂ ಆದ ಮಹಾ ಪ್ರಪಂಚ ಹಾಗೂ ಅದರಲ್ಲಿರುವ ಸಕಲ ವಸ್ತುಗಳನ್ನು ಸೃಷ್ಟಿಸಿದವನು ಏಕೈಕ ದೇವನಾಗಿರುವನು. ಅದರ ಮೇಲೆ ಆತನದೇ ಆಜ್ಞಾಧಿಕಾರ ನಡೆಯುತ್ತದೆ. ಆತನ ಸೃಷ್ಟಿಗಳ ಪೈಕಿ ಮನುಷ್ಯನೂ ಒಬ್ಬ, ಮಾನವನ ಸೃಷ್ಟಿಕರ್ತ, ಒಡೆಯ ಹಾಗೂ ಪರಿಪಾಲಕ ವಾಸ್ತವದಲ್ಲಿ ಆ ದೇವನೇ ಆಗಿರುತ್ತಾನೆ. ಮಾನವನಿಗಾಗಿ ಆ ಧೇವನು ನೀರು, ಗಾಳಿ, ಬೆಳಕನ್ನು ಒದಗಿಸಿದನು. ಹಗಲಿರುಳುಗಳನ್ನುಂಟು ಮಾಡಿದನು. ಶಾಖ ಮತ್ತು ತಂಪನ್ನು ದಯಪಾಲಿಸಿದನು. ಜನನ-ಮರಣಗಳೆರಡೂ ಆತನ ಕೈಯಲ್ಲಿದೆ. ರೋಗ-ಆರೋಗ್ಯಗಳು ಅವನಿಂದಲೇ ಬರುತ್ತದೆ. ಜನರ ಮೊರೆಯನ್ನು ಆಲಿಸ ಬಲ್ಲವನು ಅವನು ಮಾತ್ರ. ಅವರ ಬೇಡಿಕೆಗಳನ್ನು ಪೂರೈಸಿಕೊಡಲು ಅವನಿಂದಲೇ ಸಾಧ್ಯ. ಆತನ ಸಂಕಷ್ಟಗಳಿಂದ ಅವರನ್ನು ಪಾರು ಮಾಡಬಲ್ಲವರು ಯಾರೂ ಇಲ್ಲ. ಮನುಷ್ಯರ ಮೇಲೆ ಅವನು ತೋರಿದ ಅನುಗ್ರಹಗಳು- ಔದಾರ್ಯಗಳು ಅನನ್ಯ ಮತ್ತು ಅಗಣ್ಯ. ಅವುಗಳನ್ನು ಮಾನವ ಎಣಿಸಿ ಲೆಕ್ಕ ಹಾಕಲಾರ ಮತ್ತು ಅದಕ್ಕಾಗಿ ಆತನಿಗೆ ನಿಜಾರ್ಥದಲ್ಲಿ ಕೃತಜ್ಞತೆಯನ್ನೂ ಸಲ್ಲಿಸಲಾರ.

"ಭೂಮಿ-ಆಕಾಶಗಳನ್ನು ಸೃಷ್ಟಿಸಿದವನೂ ಆಕಾಶದಿಂದ ಮಳೆ ಸುರಿಸಿದವನೂ ಅದರ ಮೂಲಕ ನಿಮಗೆ ಆಹಾರವನ್ನೊದಗಿಸಲಿಕ್ಕಾಗಿ ತರತರದ ಫಲಗಳನ್ನು ಉತ್ಪಾದಿಸಿದವನೂ ಅಲ್ಲಾಹನೇ ಆಗಿರುತ್ತಾನೆ. ಅವನು ತನ್ನ ಆಜ್ಞೆ ಪ್ರಕಾರ ಸಮುದ್ರದಲ್ಲಿ ಸಂಚರಿಸುವಂತೆ ಹಡಗನ್ನು ನಿಮ್ಮ ನಿಯಂತ್ರಣಕ್ಕೆ ಕೊಟ್ಟನು ಮತ್ತು ನಿಮಗಾಗಿ ನದಿಗಳನ್ನೂ ನಿಯಂತ್ರಿಸಿದನು. ಅವನು ನಿರಂತರವಾಗಿ ಚಲಿಸುತ್ತಿರುವ ಸೂರ್ಯ ಚಂದ್ರರನ್ನು ನಿಮಗಾಗಿ ನಿಯಂತ್ರಿಸಿದನು ಮತ್ತು ರಾತ್ರೆ ಹಗಲುಗಳನ್ನು ನಿಮಗಾಗಿ ನಿಯಂತ್ರಿಸಿದನು. ಅವನು ನೀವು ಬೇಡಿದುದನ್ನೆಲ್ಲ ನಿಮಗೆ ಕೊಟ್ಟನು. ನೀವು

ಅಲ್ಲಾಹನ 'ಕೊಡುಗೆ'ಗಳನ್ನು ಎಣಿಕೆ ಮಾಡಲಿಚ್ಛಿಸಿದರೆ ಮಾಡಲಾರಿರಿ. ವಾಸ್ತವದಲ್ಲಿ ಮಾನವನು ಮಹಾ ಅನ್ಯಾಯಿಯೂ ಕೃತಘ್ನನೂ ಆಗಿರುತ್ತಾನೆ."

(ಪವಿತ್ರ ಕುರ್‌ಆನ್, 14:32-34)

## ಅಲ್ಲಾಹನ ದಾಸ್ಯ: ಎಲ್ಲರ ಜೀವನೋದ್ದೇಶವಾಗಿರಬೇಕು

ಮಾನವ ತನ್ನ ಸೃಷ್ಟಿಕರ್ತ, ಒಡೆಯ ಹಾಗೂ ಪರಿಪಾಲಕನ ದಾಸ್ಯ-ಆರಾಧನೆಗಾಗಿ ಮಾತ್ರ ಸೃಷ್ಟಿಸಲ್ಪಟ್ಟವನಾಗಿರುತ್ತಾನೆ. ಜಗತ್ತಿನಲ್ಲಿ ಮಾನವನ ಸರಿಯಾದ ನಿಲುವು ಇದುವೇ ಆಗಿದೆ. ಈ ಮೂಲಕ ಆತನು ಅಲ್ಲಾಹನ ಔದಾರ್ಯಗಳಿಗೆ ಕೃತಜ್ಞತೆಯನ್ನು ಸಲ್ಲಿಸಬಲ್ಲನು ಮತ್ತು ಆತನ ದಾಸ್ಯಕ್ಕೆ ಸಾಕ್ಷಿಯಾಗಬಲ್ಲನು.

"ಹೇ ಜನರೇ, ನಿಮ್ಮನ್ನೂ ನಿಮ್ಮ ಪೂರ್ವಿಕರನ್ನೂ ಸೃಷ್ಟಿಸಿದ ನಿಮ್ಮ ಪ್ರಭುವಿನ ದಾಸ್ಯ-ಆರಾಧನೆ ಮಾಡಿರಿ. (ಹೀಗೆ ಮಾಡಿದರೆ) ನೀವು ರಕ್ಷಣೆ ಹೊಂದಬಹುದು. ಅವನೇ ಭೂಮಿಯನ್ನು ನಿಮಗೆ ಹಾಸನ್ನಾಗಿ ಹಾಸಿದನು; ಆಕಾಶದ ಮೇಲ್ಛಾವಣಿ ಮಾಡಿದನು; ಮೇಲ್ಭಾಗದಿಂದ ಮಳೆ ಸುರಿಸಿದನು. ಅದರ ಮೂಲಕ ತರತರದ ಬೆಳೆಗಳನ್ನು ಉತ್ಪಾದಿಸಿ ನಿಮಗೆ ಆಹಾರ ಒದಗಿಸಿದನು. ಇದನ್ನು ನೀವು ಅರಿತಿರುತ್ತ ಇತರರನ್ನು ಅಲ್ಲಾಹನಿಗೆ ಪ್ರತಿಸ್ಪರ್ಧಿಗಳನ್ನಾಗಿ ಮಾಡದಿರಿ."

(ಪವಿತ್ರ ಕುರ್‌ಆನ್, 2:21-22)

## ಪ್ರವಾದಿಗಳ ಶಿಕ್ಷಣ

ಮಾನವ ಇತಿಹಾಸದ ವಿಭಿನ್ನ ಕಾಲಘಟ್ಟಗಳಲ್ಲಿ ಜಗತ್ತಿನ ವಿವಿಧ ಭಾಗಗಳಿಗೆ ಅಲ್ಲಾಹನ ವತಿಯಿಂದ ನಿಯೋಜಿತರಾದ ಪ್ರವಾದಿಗಳು ಹಾಗೂ ಮಹಾ ಪುರುಷ ರೆಲ್ಲರೂ ಇದೇ ಸಂದೇಶವನ್ನು ನೀಡಿದ್ದರು. ಪ್ರವಾದಿ ಶೃಂಖಲೆಯ ಕೊನೆಯ ಕೊಂಡಿಯಾಗಿ ಬಂದ ಪ್ರವಾದಿ ಮುಹಮ್ಮದ್(ಸ) ಅವರು ಸಹ ಇದೇ ಶಿಕ್ಷಣವನ್ನು ಜಗತ್ತಿಗೆ ಸಾರಿದರು.

"ನಾವು ನಿಮಗಿಂತ ಮುಂಚೆ ಕಳುಹಿಸಿದ ಪ್ರತಿಯೊಬ್ಬ ಸಂದೇಶವಾಹಕರಿಗೂ, 'ನನ್ನ ಹೊರತು ಅನ್ಯ ದೇವರಿಲ್ಲ, ಆದ್ದರಿಂದ ನೀವು ನನ್ನ ದಾಸ್ಯ-ಆರಾಧನೆಯನ್ನೇ ಮಾಡಿರಿ' ಎಂದು 'ದಿವ್ಯವಾಣಿ' ಮಾಡಿದ್ದೆವು." (ಪವಿತ್ರ ಕುರ್‌ಆನ್, 21:25)

## ಎಲ್ಲರನ್ನೂ ಏಕೀಕರಿಸಬಲ್ಲ ಜೀವನೋದ್ದೇಶ

ಮಾನವ ಬದುಕಿನ ಧ್ಯೇಯ ಕೇವಲ ಒಬ್ಬ ನಿರ್ದಿಷ್ಟ ವ್ಯಕ್ತಿ, ಜನಾಂಗ ಅಥವಾ ರಾಷ್ಟ್ರಕ್ಕೆ ಸೀಮಿತವಾದುದಲ್ಲ, ವಾಸ್ತವದಲ್ಲಿ ಅದು ಜಗತ್ತಿನ ಎಲ್ಲ ಮಾನವರ ಬದುಕಿನ ಧ್ಯೇಯವಾಗಿದೆ. ಅಲ್ಲಿ ಶ್ರೀಮಂತ-ಬಡವ, ಭಾರತೀಯ-ಚೀನಾ ದೇಶದವ ಹಾಗೂ ಅಮೇರಿಕದವ-ಯುರೋಪಿನವನೆಂಬ ವ್ಯತ್ಯಾಸವಿಲ್ಲ, ಅಲ್ಲಾಹನು ವ್ಯಕ್ತಿ ಮತ್ತು ಜನಾಂಗಗಳಿಗೆ ಬೇರೆ ಬೇರೆ ಜೀವನೋದ್ದೇಶವನ್ನು ಕಲಿಸಿ ಕೊಡಲಿಲ್ಲ. ಭೂಮಿಯಲ್ಲಿ ನೆಲೆಸುವ ಪ್ರತಿಯೊಬ್ಬ ವ್ಯಕ್ತಿಯೂ ಕೇವಲ ತನ್ನ ದಾಸ್ಯ-ಆರಾಧನೆ ಮಾಡಬೇಕೆಂದು ಅಲ್ಲಾಹನು ಆದೇಶಿಸಿರುವನು.

ವಾಸ್ತವದಲ್ಲಿ ಇದುವೇ ವಿಶ್ವ ಮಾನವರ ಏಕೈಕ ಜೀವನೋದ್ದೇಶ. ಪ್ರಪಂಚದ ಉತ್ತರ-ದಕ್ಷಿಣಗಳಲ್ಲಿ, ಪೂರ್ವ-ಪಶ್ಚಿಮಗಳಲ್ಲಿ ನೆಲೆಸುವ ಪ್ರತಿಯೊಬ್ಬರಿಗೂ ಪ್ರಸ್ತುತ ಉದ್ದೇಶವು ಅನ್ವಯಿಸುವಂತಿದೆ. ವರ್ಣ, ಭಾಷೆ, ದೇಶ ಮತ್ತು ಜನಾಂಗದ ಭಿನ್ನತೆಯ ಹೊರತಾಗಿಯೂ ಈ ಉದ್ದೇಶಾರ್ಥ ಎಲ್ಲರೂ ಒಂದುಗೂಡಲು ಸಾಧ್ಯವಿದೆ. ಈ ಜೀವನೋದ್ದೇಶವು ಅರಬರಿಗೆ ಸೇರಿದ್ದೆಂದು ಅರಬೇತರನೂ ಅರಬೇತರರಿಗೆ ಸೇರಿದ್ದೆಂದು ಅರಬನೂ ಹೇಳಿಕೊಳ್ಳುವಂತಿಲ್ಲ, ಕಾರಣ ಈ ಜೀವನೋದ್ದೇಶವು ಪ್ರತಿಯೊಬ್ಬ ಮನುಷ್ಯನ ಮನದ ಬೇಡಿಕೆಯಾಗಿದೆ. ವಿವಿಧ ವರ್ಣ-ಭಾಷೆಯನ್ನು ಹೊಂದಿದ ಜಗತ್ತಿನ ಎಲ್ಲಾ ಜನಾಂಗದವರನ್ನು ಈ ಜೀವನೋದ್ದೇಶವು ಆಕರ್ಷಿಸುತ್ತದೆ. ತನ್ನ ಸೃಷ್ಟಿಕರ್ತ, ಒಡೆಯ ಮತ್ತು ಪರಿಪಾಲಕನೆಡೆಗೆ ಧಾವಿಸುವುದು ಮನುಷ್ಯ ಪ್ರಕೃತಿಯಾಗಿದೆ. ಮಾನವನ ಪ್ರತಿ ಹೆಜ್ಜೆಗೂ ತನ್ನ ದೇವನೆಡೆಗೆ ಮರಳಲು ಹಾಗೂ ಅವನ ಆಸರೆಯಲ್ಲಿ ಅಭಯವನ್ನು ಕೇಳಲು ಸದಾ ನಿರ್ಬಂಧಿತನಾಗಿರುತ್ತಾನೆ. ತನಗೆ ಸಂಕಷ್ಟಗಳು ಎದುರಾದಾಗಲೆಲ್ಲ ಆತನನ್ನು ಕೂಗಿ ಕರೆಯುತ್ತಾನೆ. ತನಗೆ ಸಂತೋಷ ಅನುಭವವಾದಾಗಲೆಲ್ಲ ಆತನಿಗೆ ಕೃತಜ್ಞತೆ ಸಲ್ಲಿಸುತ್ತಾನೆ. ಆ ದೇವನ ದಾಸ್ಯ-ಆರಾಧನೆಯಲ್ಲಿ ಪ್ರತಿಯೊಬ್ಬ ಮಾನವನ ವೈಯಕ್ತಿಕವಾದ ಲಾಭವು ಅಡಗಿದೆ ಹಾಗೂ ಆತನೊಂದಿಗೆ ತೋರಲಾಗುವ ಉದ್ಧಟತನ ಮತ್ತು ಧಿಕ್ಕಾರದಲ್ಲಿ ಆತನ

ವೈಯಕ್ತಿಕ ನಷ್ಟವೂ ಇದೆ. ಅಲ್ಲಾಹನಿಗೆ ಯಾರೂ ಸಹೋದರರಿಲ್ಲ, ಅವನು ಯಾವುದೇ ಒಂದು ಮನೆತನ, ಕುಟುಂಬ ಅಥವಾ ಸಮುದಾಯಕ್ಕೆ ಸೇರಿದವನೂ ಅಲ್ಲ, ಅವನ ಅಸ್ತಿತ್ವವು ಪ್ರಪಂಚದ ಒಂದು ನಿರ್ದಿಷ್ಟ ಪ್ರದೇಶಕ್ಕೆ ಮಾತ್ರ ಸೀಮಿತ ಗೊಂಡಿಲ್ಲ, ಸಂಪೂರ್ಣ ವಿಶ್ವವನ್ನೇ ಆವರಿಸಿದೆ. ಅವನು ಸರ್ವಶ್ರುತನೂ ಸರ್ವ ವೀಕ್ಷಕನೂ ಆಗಿರುತ್ತಾನೆ. ಅವರ ಎಲ್ಲ ಮೊರೆಯನ್ನು ಅವನು ಆಲಿಸಬಲ್ಲನು. ಅವರ ಬೇಡಿಕೆಗಳನ್ನು ಪೂರೈಸಬಲ್ಲನು. ಬಿಳಿಯ-ಕರಿಯ, ಬಡವ-ಬಲ್ಲಿದ, ಒಡೆಯ-ಗುಲಾಮ, ರೈತ-ವ್ಯಾಪಾರಿ, ವಿದ್ಯಾವಂತ-ಅವಿದ್ಯಾವಂತ, ರಾಜ- ಪ್ರಜೆ ಹೀಗೆ ಎಲ್ಲರಿಗೂ ಆತನೊಂದಿಗೆ ಸಂಬಂಧ ಬೆಳೆಸಿಕೊಳ್ಳಬಹುದು. ಆತನ ದೃಷ್ಟಿಯಲ್ಲಿ ಇವರೆಲ್ಲರೂ ಸಮಾನರು. ಆತನೆಡೆಗೆ ಧಾವಿಸಿ ಎಲ್ಲರೂ ಆತನ ಸಾಮಿಪ್ಯ ಹಾಗೂ ಪ್ರೀತಿಯನ್ನು ಸಂಪಾದಿಸಬಲ್ಲರು. ಕೇವಲ ಕುಲಮಹಿಮೆಯ ಆಧಾರದಲ್ಲಿ ಯಾರೂ ಆತನ ಬಳಿ ಉನ್ನತ ಸ್ಥಾನವನ್ನು ನಿರೀಕ್ಷಿಸುವಂತಿಲ್ಲ, ಆತನ ಸಾಮಿಪ್ಯವನ್ನು ಪಡೆಯುವಲ್ಲಿ ಒಬ್ಬನ ಸುಸ್ಥಿತಿಯು ನೆರವಾಗಲಾರದು ಮತ್ತು ಇನ್ನೊಬ್ಬನ ದುಸ್ಥಿತಿಯು ತಡೆಯಲಾರದು. ಆತನ ಸಾಮಿಪ್ಯವನ್ನು ಬಯಸಿ ಆತನೆಡೆಗೆ ಧಾವಿಸುವವರನ್ನು ಆತ ಮುಂದೆ ಬಂದು ಸ್ವೀಕರಿಸುತ್ತಾನೆ. ಆಫ್ರಿಕಾದ ನೀಗ್ರೋ ಆಗಿರಲಿ ಅಥವಾ ಅಮೇರಿಕಾದ ಬಿಳಿಯನಾಗಲಿ, ಆಂಗ್ಲ ಭಾಷೆಯವನಾಗಿರಲಿ ಅಥವಾ ಹಿಂದಿ ಭಾಷೆಯವನಾಗಿರಲಿ, ಯಾರು ಆತನ ದಾಸ್ಯ-ಆರಾಧನೆಯಲ್ಲಿ ತನ್ನನ್ನು ಸಮರ್ಪಿಸ ಬಯಸುತ್ತಾನೋ ಅವರನ್ನು ಯಾರೂ ತಡೆಯುವವರಿಲ್ಲ, ಜಗತ್ತಿನ ಯಾವುದೇ ಒಂದು ಮೂಲೆಯಿಂದ ಯಾರು ಬೇಕಾದರೂ ಆತನನ್ನು ಕೂಗಿ ಕರೆಯಲಿ ಅವರಿಗೆ ಉತ್ತರಿಸಲು ಆತ ಸದಾ ಸಿದ್ಧನಾಗಿರುತ್ತಾನೆ.

**"ಓ ಪೈಗಂಬರರೇ, ನನ್ನ ದಾಸರು ನಿಮ್ಮೊಡನೆ ನನ್ನ ಬಗ್ಗೆ ಕೇಳಿದರೆ, ನಾನು ಅವರಿಗೆ ನಿಕಟನಾಗಿದ್ದೇನೆಂದೂ, ಪ್ರಾರ್ಥಿಸುವವನು ನನ್ನನ್ನು ಪ್ರಾರ್ಥಿಸಿದಾಗ ಅವನ ಪ್ರಾರ್ಥನೆಯನ್ನು ಆಲಿಸುತ್ತೇನೆಂದೂ ಅದಕ್ಕೆ ಉತ್ತರಿಸುತ್ತೇನೆಂದೂ ಅವರಿಗೆ ಹೇಳಿರಿ. ಆದುದರಿಂದ ಅವರು ನನ್ನ ಕರೆಗೆ ಓಗೊಡಲಿ ಮತ್ತು ನನ್ನ ಮೇಲೆ ವಿಶ್ವಾಸವಿರಿಸಲಿ. (ಇದನ್ನು ಅವರಿಗೆ ತಿಳಿಸಿಬಿಡಿರಿ) ಅವರು ಸನ್ಮಾರ್ಗ ಪಡೆಯಲೂಬಹುದು."**

**(ಪವಿತ್ರ ಕುರ್‌ಆನ್, 2:186)**

ಸಮಸ್ತ ವಿಶ್ವಕ್ಕೆ ಒಬ್ಬ ದೇವನಿದ್ದಾನೆ, ಮಾನವರೆಲ್ಲರೂ ಆ ದೇವನ ದಾಸರು. ಎಲ್ಲರೂ ಆತನ ದಾಸ್ಯ-ಆರಾಧನೆಗಾಗಿ ಮಾತ್ರ ಸೃಷ್ಟಿಸಲ್ಪಟ್ಟವರು ಎಂಬ ತತ್ವವು ಮಾನವರ ಮಧ್ಯೆಯಿರುವ ಭೇದಭಾವವನ್ನು ಕೊನೆಗೊಳಿಸಿ ಅವರ ಮಧ್ಯೆ ಐಕ್ಯವನ್ನು ಸ್ಥಾಪಿಸುತ್ತದೆ. ಈ ತತ್ವವನ್ನು ಅಂಗೀಕರಿಸಿದ ಜನರಲ್ಲಿ ಉಚ್ಚ ನೀಚತೆಯ ಭಾವನೆಯು ಎಂದೂ ಬೆಳೆದು ಬರಲಾರದು. ದೇವದಾಸ್ಯದ ಪ್ರಜ್ಞೆಯು ಬಿಳಿಯ-ಕರಿಯ, ಅರಬ-ಅರಬೇತರ, ಒಡೆಯ-ಗುಲಾಮ, ರಾಜ-ಪ್ರಜೆಯೆಂಬ ವ್ಯತ್ಯಾಸವಿಲ್ಲದೆ ಎಲ್ಲರನ್ನೂ ಒಂದೇ ಸಾಲಿನಲ್ಲಿ ತಂದು ನಿಲ್ಲಿಸುತ್ತದೆ. ಮೇಲು-ಕೀಳು ಎಂಬ ಭಾವನೆಯನ್ನು ಮರೆತು ಎಲ್ಲರೂ ಆತನ ಮುಂದೆ ಸಾಷ್ಟಾಂಗ ನಮಿಸುತ್ತಾರೆ.

## ಮಾನವಕುಲದ ಮೂಲ ಒಂದೇ ಆಗಿದೆ

ಮಾನವ ಸಂತತಿ ಮೂಲತಃ ಒಂದೇ ಜೀವದಿಂದ ಆರಂಭವಾಯಿತು. ಅದರಿಂದಲೇ ಅದರ ಜೋಡಿಯನ್ನು ಸೃಷ್ಟಿಸಲಾಯಿತು. ನಂತರ ಅವರೀರ್ವರಿಂದ ಅವರ ಸಂತಾನ ಬೆಳೆಯಿತು. ಇದರಿಂದಾಗಿ ಹಲವು ಕುಟುಂಬಗಳು ಅಸ್ತಿತ್ವಕ್ಕೆ ಬಂದವು. ಆ ಮೂಲಕ ಕ್ರಮೇಣ ಜನಾಂಗಗಳು ಮತ್ತು ಗೋತ್ರಗಳು ಜನ್ಮ ತಾಳಿದವು. ಹೀಗೆ ಮಾನವ ಸಂತತಿ ಭೂಮಿಯ ನಾನಾ ಪ್ರದೇಶ, ಪ್ರಾಂತ್ಯಗಳಿಗೆ ಹಬ್ಬುತ್ತಾ ಹೋಯಿತು.

"ಜನರೇ, ನೀವು ನಿಮ್ಮ ಪಾಲಕ ಪ್ರಭುವನ್ನು ಭಯಪಡಿರಿ. ಅವನು ನಿಮ್ಮನ್ನು ಒಂದು ಜೀವದಿಂದ ಸೃಷ್ಟಿಸಿದನು. ಅದೇ ಜೀವದಿಂದ ಅದರ ಜೋಡಿಯನ್ನು ಉಂಟು ಮಾಡಿದನು ಮತ್ತು ಅವೆರಡರಿಂದ ಅನೇಕಾನೇಕ ಸ್ತ್ರೀ-ಪುರುಷರನ್ನು ಲೋಕದಲ್ಲಿ ಹಬ್ಬಿಸಿದನು. ನೀವು ಯಾರ ಹೆಸರನ್ನೆತ್ತಿ ಪರಸ್ಪರ ಹಕ್ಕು ಬಾಧ್ಯತೆಗಳನ್ನು ಕೇಳುತ್ತೀರೋ ಆ ಅಲ್ಲಾಹನನ್ನು ಭಯಪಡಿರಿ. ಕುಟುಂಬ ಸಂಬಂಧಗಳನ್ನು ಕೆಡಿಸಬೇಡಿರಿ. ಅಲ್ಲಾಹನು ನಿಮ್ಮ ಮೇಲೆ ಮೇಲ್ನೋಟವನ್ನಿರಿಸಿಕೊಂಡಿರುವನೆಂಬುದನ್ನು ಚೆನ್ನಾಗಿ ಅರಿತುಕೊಳ್ಳಿರಿ."

(ಪವಿತ್ರ ಕುರ್‌ಆನ್, 4:1)

## ಮಾನವಕುಲದ ಐಕ್ಯವನ್ನು ಒಡೆಯುವುದು ಕ್ಷೋಭೆಯಾಗಿದೆ

ಜಗತ್ತಿನ ಎಲ್ಲೆಡೆಯಿರುವ ಮಾನವರೆಲ್ಲರೂ ಮೂಲತಃ ಒಂದೇ ತಂದೆ-ತಾಯಿಯ ಮಕ್ಕಳು. ಪರಸ್ಪರ ಏಕೋದರ ಸಹೋದರರು. ಇವರ ಮಧ್ಯೆ ಅಲ್ಲಾಹ ನಿರಿಸಿರುವ ಸಹೋದರತೆಯ ಸಂಬಂಧವನ್ನು ಮುರಿಯಲು ಇಸ್ಲಾಮ್ ಎಂದೂ ಅನುಮತಿಸುವುದಿಲ್ಲ. ಈ ನಿಟ್ಟಿನಲ್ಲಿ ಮುಂದಾಗುವವರನ್ನು ಅದು ಸಂಪೂರ್ಣವಾಗಿ ವಿರೋಧಿಸುತ್ತದೆ. ಈ ಸಂಬಂಧವನ್ನು ಮುರಿಯುವುದಾಗಲಿ, ಅದಕ್ಕೆ ಭಂಗ ತರುವುದಾಗಲಿ ಇಸ್ಲಾಮಿನ ಪ್ರಕಾರ ಕ್ಷೋಭೆಯಾಗಿದೆ. ಪವಿತ್ರ ಕುರ್‌ಆನಿನಲ್ಲಿ ಪ್ರವಾದಿ ಮೂಸಾ(ಅ) ಮತ್ತು ಫಿರ್‌ಔನ್‌ನ ಕುರಿತು ಸುದೀರ್ಘ ವೃತ್ತಾಂತವಿದೆ. ಫಿರ್‌ಔನನು ಅಲ್ಲಾಹನೊಂದಿಗೆ ಧಿಕ್ಕಾರ ಮತ್ತು ಉದ್ಧಟತನವನ್ನು ಮೆರೆದನು. ಮಾನವ ಸಮುದಾಯವನ್ನು ವಿವಿಧ ವರ್ಗಗಳಾಗಿ ಹಂಚಿದನು. ಒಂದು ವಿಭಾಗ ಅಜ್ಞಾಧಿಕಾರಿಗಳದ್ದಾದರೆ ಇನ್ನೊಂದು ವಿಭಾಗ ಆಜ್ಞಾಪಾಲಕರದು. ಅಲ್ಲಾಹನು ಪ್ರವಾದಿ ಮೂಸಾ(ಅ) ಮುಖಾಂತರ ಈ ಕ್ಷೋಭೆಯನ್ನು ಕೊನೆ ಗೊಳಿಸಿದನು. ಶೋಷಿತರಿಗೆ ಸಹಾಯ ಹಸ್ತ ನೀಡಿ ಅನ್ಯಾಯಗಾರರನ್ನು ನಾಮಾವಶೇಷಗೊಳಿಸಿ ಬಿಟ್ಟನು.

"ವಿಷಯವೇನೆಂದರೆ- ಫಿರ್‌ಔನನು ಭೂಮಿಯಲ್ಲಿ ಬಂಡಾಯವೆದ್ದನು ಮತ್ತು ಅದರ ನಿವಾಸಿಗಳನ್ನು ಪಂಗಡಗಳಾಗಿ ವಿಂಗಡಿಸಿ ಬಿಟ್ಟನು. ಆ ಪೈಕಿ ಒಂದು ಪಂಗಡವನ್ನು ಅವನು ಅವಮಾನಿಸುತ್ತಿದ್ದನು. ಅವರ ಗಂಡು ಮಕ್ಕಳನ್ನು ವಧಿಸುತ್ತಿದ್ದನು ಮತ್ತು ಹೆಣ್ಣು ಮಕ್ಕಳನ್ನು ಬದುಕಿರಲು ಬಿಡುತ್ತಿದ್ದನು. ನಿಜಕ್ಕೂ ಅವನು ದಂಗೆಕೋರರಲ್ಲಾಗಿದ್ದನು. ನಾವು ಭೂಮಿಯಲ್ಲಿ ತುಳಿಯಲ್ಪಟ್ಟವರ ಮೇಲೆ ಕೃಪೆ ತೋರಬೇಕೆಂದೂ ಅವರನ್ನು ನಾಯಕರಾಗಿ ಮಾಡಿ ಬಿಡಬೇಕೆಂದೂ ಅವರನ್ನೇ ಉತ್ತರಾಧಿಕಾರಿಗಳಾಗಿ ಮಾಡಬೇಕೆಂದೂ ಭೂಮಿಯಲ್ಲಿ ಅವರಿಗೆ ಪ್ರಭುತ್ವ ನೀಡಬೇಕೆಂದೂ ಫಿರ್‌ಔನ್, ಹಾಮಾನ್ ಮತ್ತು ಅವರ ಸೇನೆಗಳಿಗೆ ಯಾವುದರ ಭಯವಿತ್ತೋ ಅದನ್ನೇ ತೋರಿಸಿಕೊಡಬೇಕೆಂದೂ ಬಯಸಿದ್ದೆವು."

(ಪವಿತ್ರ ಕುರ್‌ಆನ್, **28:4-6**)

## ವರ್ಣ, ಕುಲ ಹಾಗೂ ಭಾಷೆಯ ಭಿನ್ನತೆ-ದೇವ ದೃಷ್ಟಾಂತಗಳಾಗಿವೆ

ಇಸ್ಲಾಮ್ ಧರ್ಮ ಮಾನವರ ಮಧ್ಯೆ ಸಹಜವಾಗಿರುವ ವರ್ಣ, ಕುಲ, ಭಾಷೆ, ಜನಾಂಗ ಮತ್ತು ರಾಷ್ಟ್ರೀಯತೆಯ ಆಧಾರದಲ್ಲಿರುವ ಭಿನ್ನತೆಗಳನ್ನು ಅಲ್ಲಾಹನ ಹಲವು ದೃಷ್ಟಾಂತಗಳ ಪೈಕಿ ಒಂದೆಂದು ಪರಿಗಣಿಸುತ್ತದೆ. ಮಾನವರ ಮಧ್ಯೆಯಿರುವ ಈ ಭಿನ್ನತೆಗಳು ಪ್ರಪಂಚದ ಮೇಲೆ ಅದರ ಸೃಷ್ಟಿಕರ್ತ ಹಾಗೂ ಒಡೆಯ ನಾದವನ ಅಧಿಕಾರ ಪ್ರಾಬಲ್ಯವಿದೆ ಎಂಬ ವಾಸ್ತವಿಕತೆಯನ್ನು ಸಾರುತ್ತದೆ. ಅಲ್ಲಾಹನು ತಾನಿಚ್ಛಿಸಿದ ಕೆಲವರಿಗೆ ಐಶ್ವರ್ಯವನ್ನು ದಯಪಾಲಿಸಿದರೆ ಇನ್ನು ಕೆಲವರನ್ನು ಅದರಿಂದ ವಂಚಿತ ಗೊಳಿಸುತ್ತಾನೆ. ಆತ ಯಾರನ್ನು ಎಲ್ಲಿ ಬೇಕಾದರೂ ಹುಟ್ಟಿಸ ಬಲ್ಲನು. ಇನ್ನು ಯಾವನಾದರೂ ಒಬ್ಬ ವ್ಯಕ್ತಿ ಇವುಗಳ ಪೈಕಿ ಯಾವುದೇ ಒಂದು ಸಂಗತಿಯನ್ನು ಅದು ನನ್ನ ದೊಡ್ಡಸ್ಥಿಕೆಯ ಪರಿಣಾಮವೆಂದು ಬಗೆದರೆ ಆತನು ದೇವನ ಮಹಾ ದೃಷ್ಟಾಂತದಿಂದ ಪಾಠ ಕಲಿಯಲಿಲ್ಲವೆಂದರ್ಥ. ಮತ್ತು ಆತನಾದರೋ ದೇವ ದೃಷ್ಟಾಂತ ಗಳ ಅಧ್ಯಯನ ನಡೆಸುವ ಸಾಮರ್ಥ್ಯದಿಂದ ಸಂಪೂರ್ಣ ವಂಚಿತನಾಗಿರುತ್ತಾನೆ.

"ಅವನು ನಿಮ್ಮನ್ನು ಮಣ್ಣಿನಿಂದ ಸೃಷ್ಟಿಸಿದುದು, ತರುವಾಯ ಒಮ್ಮೆಲೇ ನೀವು ಮಾನವರಾಗಿ (ಭೂಮಿಯಲ್ಲಿ) ಹಬ್ಬುತ್ತಾ ಹೋಗುತ್ತಿರುವುದು ಅವನ ನಿದರ್ಶನಗಳ ಲ್ಲೊಂದಾಗಿದೆ. ಅವನು ನಿಮಗಾಗಿ ನಿಮ್ಮ ವರ್ಗದಿಂದಲೇ ಜೋಡಿಗಳನ್ನು ಸೃಷ್ಟಿಸಿ, ನೀವು ಅವರ ಬಳಿ ಪ್ರಶಾಂತಿಯನ್ನು ಪಡೆಯುವಂತೆ ಮಾಡಿದುದು ಮತ್ತು ನಿಮ್ಮ ನಡುವೆ ಪ್ರೇಮ ಮತ್ತು ಅನುಕಂಪವನ್ನುಂಟು ಮಾಡಿದುದೂ ಅವನ ನಿದರ್ಶನಗಳ ಲ್ಲೊಂದಾಗಿದೆ. ನಿಶ್ಚಯವಾಗಿಯೂ ವಿವೇಚಿಸುವವರಿಗೆ ಇದರಲ್ಲಿ ಅನೇಕ ನಿದರ್ಶನ ಗಳಿವೆ. ಆಕಾಶಗಳ ಮತ್ತು ಭೂಮಿಯ ಸೃಷ್ಟಿಯೂ ನಿಮ್ಮ ಭಾಷೆಗಳ ಹಾಗೂ ವರ್ಣ ಗಳ ತಾರತಮ್ಯವೂ ಅವನ ನಿದರ್ಶನಗಳಲ್ಲಿ ಒಂದಾಗಿದೆ. ನಿಶ್ಚಯವಾಗಿಯೂ ಜ್ಞಾನಿ ಗಳಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ. ಇರುಳು ಹಗಲುಗಳಲ್ಲಿ ನಿಮ್ಮ ನಿದ್ರೆಯೂ ನೀವು ಅವನ ಅನುಗ್ರಹವನ್ನರಸುವುದೂ ಅವನ ನಿದರ್ಶನಗಳಲ್ಲೊಂದಾಗಿದೆ. ನಿಶ್ಚಯವಾಗಿಯೂ ಲಕ್ಷ್ಯವಿಟ್ಟು ಆಲಿಸುವವರಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ."

(ಪವಿತ್ರ ಕುರ್‌ಆನ್, 30:20-23)

ಈ ಸೂಕ್ತಗಳಲ್ಲಿ ಇನ್ನೂ ಮುಖ್ಯವಾದ ಕೆಲವು ವಾಸ್ತವಿಕತೆಗಳು ವ್ಯಕ್ತವಾಗುತ್ತದೆ:

1. ಅಲ್ಲಾಹನು ಮಾನವರನ್ನು ಮಣ್ಣಿನಿಂದ ಸೃಷ್ಟಿಸಿದನು ಎಂಬ ಪವಿತ್ರ ವಾಕ್ಯದ ಮೂಲಕ ಪವಿತ್ರ ಕುರ್‌ಆನ್ ಮಾನವನಲ್ಲಿನ ಜನಾಂಗೀಯ, ಸಾಮುದಾಯಿಕ, ಆರ್ಥಿಕ, ವೈಜ್ಞಾನಿಕ, ವೈಚಾರಿಕ ಮೊದಲಾದ ಡಾಂಬಿಕತೆಯ ಗುಣಗಳನ್ನು ಮುರಿದು ಹಾಕಿತು. ಆತ ಒಂದು ಊರಿನ ಅರಸನಾಗಿರಲಿ, ಅಧಿಕಾರ ಶಾಹಿತ್ವವನ್ನು ಹೊಂದಿದ ಮನೆತನದೊಂದಿಗೆ ಸಂಬಂಧವಿರುವವನಾಗಿರಲಿ, ವರ್ತಕನಾಗಿರಲಿ ಅಥವಾ ಅತ್ಯಧಿಕ ಬಂಡವಾಳ ಹೊಂದಿದವನಾಗಿರಲಿ ಎಲ್ಲರೂ ಮಣ್ಣಿನಿಂದ ಸೃಷ್ಟಿಸಲ್ಪಟ್ಟವರೇ ಆಗಿರುತ್ತಾರೆ. ಈ ವಾಸ್ತವಿಕತೆಯನ್ನು ಯಾರೂ ನಿರಾಕರಿಸುವಂತಿಲ್ಲ.

2. ಜಗತ್ತು ಸ್ತ್ರೀ-ಪುರುಷರ ಮಧ್ಯೆ ಮೇಲು-ಕೀಳೆಂಬ ವ್ಯತ್ಯಾಸವನ್ನು ಕಲ್ಪಿಸಿತ್ತು. ಪುರುಷನು ಶ್ರೇಷ್ಠನಾಗಿ ಮರೆಯುತ್ತಿದ್ದರೆ ಸ್ತ್ರೀಯು ನಿಕೃಷ್ಟಳಾಗಿ ಕಾಣಲ್ಪಡುತ್ತಿದ್ದಳು. ಇಂದಿಗೂ ಈ ವಿಭಜನೆಯು ಅಸ್ತಿತ್ವದಲ್ಲಿದೆ. ಅಲ್ಲಾಹನು ಸ್ತ್ರೀಯರನ್ನೂ ಪುರುಷರನ್ನೂ 'ಒಂದೇ ಜೀವದಿಂದ ಸೃಷ್ಟಿಸಿದನು' ಎಂಬ ಪವಿತ್ರ ಕುರ್‌ಆನಿನ ಸೂಕ್ತವು ಈ ಅನರ್ಥಕಾರಿ ವಿಭಜನೆಯನ್ನು ಖಂಡಿಸುತ್ತದೆ. ಪುರುಷ ವರ್ಗದಿಂದಲೇ ಆತನ ಜೋಡಿಯನ್ನು ಸೃಷ್ಟಿಸಲು ಸ್ತ್ರೀ-ಪುರುಷರ ಮಧ್ಯೆ ಮೇಲು ಕೀಳೆಂಬ ವ್ಯತ್ಯಾಸವನ್ನು ಕಲ್ಪಿಸುವುದರಲ್ಲಿ ಅರ್ಥವಿಲ್ಲ. ಅಲ್ಲಾಹನಾದರೋ ಸ್ತ್ರೀ-ಪುರುಷರ ಮಧ್ಯೆ ಪ್ರೀತಿ ಪ್ರೇಮದ ಕಾಲುವೆಯನ್ನೇ ಹರಿಸಿರುವನು. ಆದುದರಿಂದ ಸ್ತ್ರೀ-ಪುರುಷರ ಮಧ್ಯೆ ಹಗೆತನ ಮತ್ತು ವೈರತ್ವದ ವಿಷ ಬೀಜ ಮೊಳಕೆಯೊಡೆಯುವುದು ಅಸಹಜ.

3. ಕುರ್‌ಆನ್ ಹೇಳುತ್ತದೆ, ಭೂಮಿ-ಆಕಾಶಗಳನ್ನು ಸೃಷ್ಟಿಸುವುದು ಅಲ್ಲಾಹನ ದೃಷ್ಟಾಂತಗಳ ಪೈಕಿ ಒಂದಾಗಿರುತ್ತದೆ.

ಅಲ್ಲಾಹನ ಈ ದೃಷ್ಟಾಂತಗಳನ್ನು ಯಾರೂ ನಿರಾಕರಿಸುವಂತಿಲ್ಲ. ಈ ಮಾತಿನಲ್ಲಿ ಅತಿ ಸೂಕ್ಷ್ಮವಾದ ವಿಚಾರವೊಂದು ನಮ್ಮ ಗಮನಕ್ಕೆ ಬರುತ್ತದೆ. ಅದೇನೆಂದರೆ ಭೂಮಿ-ಆಕಾಶಗಳ ನಡುವೆ ಲಕ್ಷಾಂತರ ಮೈಲುಗಳ ಅಂತರವಿದ್ದರೂ ಸಹ ಅವುಗಳ ಮಧ್ಯೆ ಅಲ್ಲಾಹನು ಐಕ್ಯತೆಯನ್ನು ಸೃಷ್ಟಿಸಿರುತ್ತಾನೆ. ಅವು ಪರಸ್ಪರ ಢಿಕ್ಕಿ ಹೊಡೆಯದೆ ಅಲ್ಲಾಹನು ಇರಿಸಿರುವ ಕಕ್ಷೆಯಲ್ಲಿ ಸುತ್ತುತ್ತಿದೆ. ಭೂಮುಖದಲ್ಲಿರುವ

ಮನುಷ್ಯರೆಲ್ಲರೂ ಈ ನಿಯಮ ವ್ಯವಸ್ಥೆಗೆ ಬದ್ಧವಾದರೆ ಅವರ ಮಧ್ಯೆಯಿರುವ ಎಲ್ಲ ಜಗಳ-ಕಾಳಗಗಳು ಕೊನೆಗೊಂಡು ಅವರ ಮಧ್ಯೆ ಐಕ್ಯ ಜನ್ಮ ತಾಳೀತು.

4. ವರ್ಣ, ರೂಪ ಮತ್ತು ಭಾಷೆಯ ಭಿನ್ನತೆಯನ್ನು ದೇವನ ಒಂದು ದೃಷ್ಟಾಂತವೆಂದು ಪರಿಗಣಿಸಲಾಗಿದೆ. ದೇವನ ದೃಷ್ಟಾಂತಗಳು ಪಾಠದಾಯಕವಾಗುತ್ತದೆಯೇ ಹೊರತು ಜಗಳ ಕಾಯಲು ಕಾರಣವಾಗಲಾರದು.

5. ಈ ಲೋಕದಲ್ಲಿ ಮಾನವನು ನಿದ್ರೆ, ಎಚ್ಚರ ಹಾಗೂ ಹೊಟ್ಟೆ ಪಾಡಿನ ದುಡಿಮೆಗೆ ನಿರ್ಬಂಧಿತನಾಗುತ್ತಾನೆ. ಇದು ದೇವನ ಒಂದು ದೃಷ್ಟಾಂತವಾಗಿರುತ್ತದೆ. ಇದು ಈ ಲೋಕದಲ್ಲಿ ಬೇಡಿಕೆಗಳಿಲ್ಲದ ಯಾವ ಮನುಷ್ಯನೂ ಇಲ್ಲ, ಈ ಬೇಡಿಕೆಗಳು ಒಂದೇ ಸ್ವರೂಪದ್ದಾಗಿದೆ ಎಂದು ಸೂಚಿಸುತ್ತದೆ. ಜೀವನಾವಶ್ಯಕತೆಗಳು ಮಾನವರೆಲ್ಲರನ್ನು ಒಂದುಗೂಡಿಸುವಾಗ ಅವರಲ್ಲಿ ಉಚ್ಚ-ನೀಚತೆಯು ಅರ್ಥಹೀನವಾಗಿದೆ. ಈ ವಾಸ್ತವಿಕತೆಯ ಕುರಿತು ಪವಿತ್ರ ಕುರ್‌ಆನ್ ಕೆಲವೆಡೆ ಸವಿವರವಾಗಿಯೂ ಇನ್ನು ಕೆಲವೆಡೆ ಸಂಕ್ಷಿಪ್ತವಾಗಿಯೂ ಬೆಳಕು ಹರಿಸಿದೆ. ಮಾನವ ಸಮೂಹವು ಶಾಂತಚಿತ್ತದಿಂದ ಈ ಕುರಿತು ಚಿಂತಿಸಿದರೆ ಪ್ರಾಯಶಃ ಮಾನವ ಸಮುದಾಯದ ಎಲ್ಲರೂ ವೈವಿಧ್ಯತೆಗಳ ಹೊರತಾಗಿಯೂ ಏಕತೆಯನ್ನು ಸಾಧಿಸಲು ನಿರ್ಬಂಧಿತರಾಗುವರು.

## ದೇವ ಭಯವೇ ಶ್ರೇಷ್ಠತೆಯ ಮಾನದಂಡ

ಮಾನವರ ಮಧ್ಯೆ ಸಾಮಾನ್ಯವಾಗಿರುವ ವರ್ಣ, ಭಾಷೆ, ಕುಲ, ಜನಾಂಗ ಹಾಗೂ ರಾಷ್ಟ್ರದ ಆಧಾರದಲ್ಲಿರುವ ಭಿನ್ನತೆಯನ್ನು ದೇವನ ದೃಷ್ಟಾಂತವೆಂದು ತಿಳಿದು ಅದರಿಂದ ಪಾಠ ಕಲಿತುಕೊಳ್ಳದೆ ಅದನ್ನು ಉಚ್ಚ-ನೀಚತೆಯ ಮಾನದಂಡವೆಂದು ಪರಿಗಣಿಸಿರುವುದು ಆತನ ಅತಿ ದೊಡ್ಡ ದೌರ್ಭಾಗ್ಯವೆಂದು ಹೇಳಬಹುದು. ವಾಸ್ತವದಲ್ಲಿ ವರ್ಣ, ರೂಪ, ಭಾಷೆ ಮತ್ತು ಉಡುಗೆ ತೊಡುಗೆಗಳು ಉಚ್ಚ-ನೀಚತೆಯ ಮಾನದಂಡವೇ ಅಲ್ಲ, ವಿಶ್ವಾಸ, ನಂಬಿಕೆ ಮತ್ತು ಆಚಾರ ವಿಚಾರಗಳೇ ಅದರ ನಿಜವಾದ ಮಾನದಂಡ. ಯಾರು ತನ್ನನ್ನು ದೇವನ ದಾಸನೆಂದು

ಒಪ್ಪಿಕೊಂಡು ಆತನಿಗೆ ಭಯಪಟ್ಟು ಜೀವನ ಸಾಗಿಸುತ್ತಾ ಆತನ ಕೃಪೆ-ಅನುಗ್ರಹ ಗಳಿಗೆ ಪಾತ್ರನಾಗಲು ಪ್ರಯತ್ನಿಸುತ್ತಾನೋ ಆ ವ್ಯಕ್ತಿ ದೇವನ ಬಳಿ ಶ್ರೇಷ್ಠನಾಗಿ ಪರಿಗಣಿಸಲ್ಪಡುತ್ತಾನೆ. ಇನ್ನು ಈ ಗುಣಗಳಿಂದ ಮುಕ್ತನಾದ ವ್ಯಕ್ತಿಯು ಜಗತ್ತಿನ ದೃಷ್ಟಿಯಲ್ಲಿ ಎಷ್ಟೇ ಉತ್ತಮನೂ ಗೌರವಾರ್ಹನೂ ಆಗಿದ್ದರೂ ಸಹ ದೇವನ ಬಳಿ ಆತನಿಗೆ ಯಾವುದೇ ಸ್ಥಾನವಿರಲಾರದು.

**"ಜನರೇ, ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಒಬ್ಬ ಸ್ತ್ರೀಯಿಂದ ಉಂಟು ಮಾಡಿದೆವು. ತರುವಾಯ ನೀವು ಪರಸ್ಪರ ಪರಿಚಯಪಟ್ಟುಕೊಳ್ಳಲಿಕ್ಕಾಗಿ ನಿಮ್ಮ ಜನಾಂಗಗಳನ್ನೂ ಗೋತ್ರ ಗಳನ್ನೂ ಮಾಡಿದೆವು. ನಿಮ್ಮ ಪೈಕಿ ಅತ್ಯಧಿಕ ಧರ್ಮ ನಿಷ್ಠನೇ ವಾಸ್ತವದಲ್ಲಿ ಅಲ್ಲಾಹನ ಬಳಿ ಅತಿ ಹೆಚ್ಚು ಗೌರವಕ್ಕೆ ಪಾತ್ರನು. ನಿಶ್ಚಯ ವಾಗಿಯೂ ಅಲ್ಲಾಹನು ಸರ್ವಜ್ಞನೂ ವಿವರಪೂರ್ಣನೂ ಆಗಿರುತ್ತಾನೆ."**

**(ಪವಿತ್ರ ಕುರ್‌ಆನ್, 49:13)**

ಕುರ್‌ಆನಿನ ಈ ಸೂಕ್ತವು ಉಚ್ಚ-ನೀಚತೆಯ ಎಲ್ಲಾ ತಪ್ಪು ಮಾನದಂಡ ಗಳನ್ನು ಅಳಿಸಿ ಹಾಕಿತು. ಕೇವಲ ಹುಟ್ಟಿನ ಆಧಾರದಲ್ಲಿ ಯಾರಿಗೂ ಯಾವುದೇ ರೀತಿಯ ಶ್ರೇಷ್ಠತೆಯಿಲ್ಲವೆಂದು ಸ್ಪಷ್ಟವಾಗಿ ಸಾರಿತು. ಇಲ್ಲಿ ತಾಯಿಯ ಉದರದಿಂದ ಜನ್ಮ ಪಡೆಯುವವರಾರೂ ಪಾಪದ ಭಾರ ಹೊತ್ತು ಬರುವುದಿಲ್ಲ, ಪಾಪ ಮುಕ್ತ ವ್ಯಕ್ತಿಯಾಗಿಯೂ ಜನಿಸುವುದಿಲ್ಲ ಮತ್ತು ಯಾರೂ ಉಚ್ಚ-ನೀಚತೆಯ ಲಕ್ಷಣಗಳನ್ನು ಹಿಡಿದು ಬರುವುದಿಲ್ಲ, ಮಾನವನ ಶ್ರೇಷ್ಠತೆಯು ಆತನ ದೇವಭಯವನ್ನು ಅವಲಂಬಿಸಿದೆ. ಅಲ್ಲಾಹನ ಆಸ್ಥಾನದಲ್ಲಿ ಕುಲಗೋತ್ರ, ಜನಾಂಗದ ಪ್ರಶ್ನೆಯೇ ಉದ್ಭವಿಸುವುದಿಲ್ಲ, ಯಾರ ಹೃದಯದಲ್ಲಿ ದೇವ ಭಯವಿದೆಯೋ ಅವರು ಮಾತ್ರ ಆತನ ಪುರಸ್ಕಾರಗಳಿಗೆ ಅರ್ಹರಾಗುತ್ತಾರೆ. ಯಾರ ಜೀವನವು ದೇವ ಭಯದಿಂದ ಮುಕ್ತವಾಗಿರುತ್ತದೋ ಅವರು ಅಲ್ಲಾಹನ ಹಿಡಿತದಿಂದ ಪಾರಾಗಲಾರರು.

## ತಪ್ಪು ಮಾನದಂಡಗಳ ಸುಧಾರಣೆ

ಜಗತ್ತಿನ ವಿವಿಧ ಸಮುದಾಯಗಳು ಇಟ್ಟುಕೊಂಡಿದ್ದ ಉಚ್ಚ-ನೀಚತೆಯ ಎಲ್ಲಾ ಅನರ್ಥಕಾರಿ ಮಾನದಂಡಗಳನ್ನು ಪ್ರವಾದಿ ಮುಹಮ್ಮದ್(ಸ) ಅವರು

ಒಂದೊಂದಾಗಿ ಕಿತ್ತು ಹಾಕಿದರು ಮತ್ತು ದೇವಭಯವೇ ಮಾನವಕುಲದ ಶ್ರೇಷ್ಠತೆಯ ನಿಜವಾದ ಮಾನದಂಡವೆಂದು ಸಾರಿದರು.

## ಜಾತಿ-ಪಂಗಡದ ಅಭಿಮಾನದ ಕುರಿತು ಒಂದು ವಿಮರ್ಶೆ

ಜಾತಿ ಅಥವಾ ಪಂಗಡದ ಮೇಲಿನ ಅಭಿಮಾನವು ಅನ್ಯ ಜಾತಿ ಮತ್ತು ಪಂಗಡದವರಿಗೆ ಸಮಾನವಾದ ಸ್ಥಾನಮಾನ ನೀಡುವುದನ್ನಾಗಲಿ, ಅವರೊಂದಿಗೆ ಸಮಾನವಾಗಿ ವ್ಯವಹರಿಸುವುದನ್ನಾಗಲಿ ಎಂದೂ ಸಹಿಸುವುದಿಲ್ಲ. ಪ್ರವಾದಿ ಮುಹಮ್ಮದ್(ಸ) ಅವರು ಹಜ್ಜತುಲ್ ವಿದಾಅ್‌ನ ಸಂದರ್ಭದಲ್ಲಿ ನಡೆಸಿದ್ದ ಪ್ರಸಿದ್ಧ ಪ್ರವಚನದಲ್ಲಿ ಜಾತಿ ಪಂಗಡದ ಮೇಲ್ಮೆಯ ವಿರುದ್ಧ ಪ್ರಹಾರ ನಡೆಸಿದರು ಮತ್ತು ಮಾನವ ಸಮುದಾಯದ ಎಲ್ಲರೂ ಒಂದೇ ಆಗಿರುತ್ತಾರೆ ಎಂದು ಸಾರಿದರು.

ಓ ಮನುಷ್ಯರೇ! ನಿಸ್ಸಂಶಯವಾಗಿಯೂ ನೀವೆಲ್ಲರೂ ಒಬ್ಬನೇ ದೇವನ ದಾಸರು. ನಿಮ್ಮೆಲ್ಲರ ತಂದೆಯೂ ಒಬ್ಬನೇ. ತಿಳಿದಿರಲಿ! ಅರಬನಿಗೆ ಅರಬೇತರನ ಮೇಲೆ. ಅರಬೇತರನಿಗೆ ಅರಬನ ಮೇಲೆ, ಕರಿಯನಿಗೆ ಬಿಳಿಯನ ಮೇಲೆ, ಬಿಳಿಯನಿಗೆ ಕರಿಯನ ಮೇಲೆ ದೇವಭಯದ ಹೊರತು ಯಾವುದೇ ರೀತಿಯ ಮೇಲ್ಮೆಯಿಲ್ಲ. **(ಮುಸ್ನದ್ ಅಹ್ಮದ್)**

ಹಜ್ಜತುಲ್ ವಿದಾಅ್‌ನ ಸಂದರ್ಭದಲ್ಲಿ ಸಂಪೂರ್ಣ ಹಿಜಾಝ್ (ಅರೇಬಿಯಾ) ಪ್ರವಾದಿವರ್ಯರ(ಸ) ಕೈ ಕೆಳಗಿತ್ತು. ಪ್ರವಾದಿವರ್ಯರು(ಸ) ಸ್ವತಃ ಅರಬರಾಗಿದ್ದರು. ಅವರ ಅನುಯಾಯಿಗಳು ಸಹ ಅರಬರಾಗಿದ್ದರು. ಆದುದರಿಂದ ಅರಬರಲ್ಲಿ ತಮ್ಮ ಕುರಿತು (ಶ್ರೇಷ್ಠತೆಯ) ಉಚ್ಚ ಭಾವನೆ ಬೆಳೆಯುವ ಸಾಧ್ಯತೆಯಿತ್ತು. ಪ್ರವಾದಿ ಮುಹಮ್ಮದ್(ಸ) ಅವರು ಅದಕ್ಕೆ ಆಸ್ಪದ ನೀಡಲಿಲ್ಲ, ಅವರು ಹೇಳಿದರು,

ಎಲ್ಲಾ ಮಾನವರು ಒಂದೇ ದೇವನ ದಾಸರು ಮತ್ತು ಒಂದೇ ತಂದೆ-ತಾಯಿಯ ಮಕ್ಕಳು. ಇವರ ಪೈಕಿ ಯಾರು ಹೆಚ್ಚು ದೇವಭಯವನ್ನಿರಿಸಿಕೊಳ್ಳುತ್ತಾರೋ ಅವರು ಮಾತ್ರ ದೇವನ ಬಳಿ ಶ್ರೇಷ್ಠರೆಂದು ಪರಿಗಣಿಸಲ್ಪಡುತ್ತಾರೆ. ಒಮ್ಮೆ ಪ್ರವಾದಿ ವರ್ಯರು(ಸ) ತನ್ನ ಸಂಗಾತಿ ಅಬೂದರ್(ರ) ಅವರೊಂದಿಗೆ ಹೇಳಿದರು, ನೋಡು!

ನೀನು ಯಾವನೇ ಒಬ್ಬ ಕರಿಯ ಅಥವಾ ಬಿಳಿಯನಿಗಿಂತ ಶ್ರೇಷ್ಠನಲ್ಲ, ಆದರೆ ದೇವ ಭಯದ ಮೂಲಕ ಅವರಲ್ಲಿ ಶ್ರೇಷ್ಠನೆನಿಸಿಕೊಳ್ಳಬಹುದು. (ಮುಸ್ನದ್ ಅಹ್ಮದ್)

## ಕುಲಗೋತ್ರದ ಮಹಿಮೆಯ ಕುರಿತು ಒಂದು ವಿಮರ್ಶೆ

ಕುಲಗೋತ್ರಗಳ ಮೇಲ್ಮೆಯೂ ಕೂಡಾ ಜಾತಿ ಮತ್ತು ಪಂಗಡಗಳಂತೆ ಮಾನವೀಯ ಏಕತೆಗೆ ಭಾರೀ ಹಾನಿಯನ್ನುಂಟು ಮಾಡಿದೆ. ಪ್ರವಾದಿ ಮುಹಮ್ಮದ್(ಸ) ಅವರು ಇದನ್ನು ಕೂಡಾ ವಿರೋಧಿಸಿದರು. ಹಝ್ರತ್ ಅಬೂಹುರೈರಾ(ರ) ಅವರು ವರದಿ ಮಾಡಿರುವರು: ಪ್ರವಾದಿ(ಸ) ಹೇಳಿದರು,

ಜನರು ಗತಿಸಿ ಹೋದ ತಮ್ಮ ತಾತಂದಿರ ವಿಚಾರದಲ್ಲಿ ಅಭಿಮಾನಪಡುವುದನ್ನು ಬಿಟ್ಟುಬಿಡಬೇಕು. ಏಕೆಂದರೆ ಅವರಾದರೋ ನರಕಾಗ್ನಿಯ ಇಂಧನವಾಗಿ ಬಿಟ್ಟರು, ಅನ್ಯಥಾ ಅವರು ಮೂಗಿನಲ್ಲಿ ಮಾಲಿನ್ಯವನ್ನು ಹೊತ್ತು ತಿರುಗುವ ಹಂದಿಗಿಂತಲೂ ನಿಂದ್ಯರಾಗುವರು. ಅಲ್ಲಾಹನು ನಿಮ್ಮಿಂದ ಅಜ್ಞಾನ ಕಾಲದ ಮೇಲ್ಮೆ ಮತ್ತು ತಾತ ಮುತ್ತಾತಂದಿರ ಮೇಲೆ ಪ್ರತಿಷ್ಠೆ ಮರೆಯುವುದನ್ನು ದೂರೀಕರಿಸಿರುವನು. ಸಮಾಜದಲ್ಲಿ ಎರಡು ರೀತಿಯ ಜನರಿರುವರು. ಒಂದೋ ಆತ ದೇವಭಯವುಳ್ಳ ಸತ್ಯವಿಶ್ವಾಸಿಯಾಗಿರುತ್ತಾನೆ ಅಥವಾ ದೌರ್ಭಾಗ್ಯಶಾಲಿಯಾದ ದುಷ್ಟನಾಗಿರುತ್ತಾನೆ. ಜನರೆಲ್ಲರೂ ಆದಮನ ಮಕ್ಕಳು. ಆದಮ್‌ರಾದರೋ ಮಣ್ಣಿನಿಂದ ಸೃಷ್ಟಿಸಲ್ಪಟ್ಟವರು.

ಹಝ್ರತ್ ಸಮ್‌ರ ಬಿನ್ ಜುಂದುಬ್(ರ) ವರದಿ ಮಾಡಿರುವರು- ಪ್ರವಾದಿ ಮುಹಮ್ಮದ್(ಸ) ಹೇಳಿರುವರು, ಒಬ್ಬನ ಕುಲ ಆತನಲ್ಲಿರುವ ಸಂಪತ್ತಾಗಿರುತ್ತದೆ. ಆತನಲ್ಲಿರುವ ದೇವಭಯವು ಆತನ ಪ್ರತಿಷ್ಠೆ ಮತ್ತು ಶ್ರೇಷ್ಠತೆಯ ಸಂಕೇತವಾಗಿರುತ್ತದೆ.

ಕುಲಗೋತ್ರಗಳು ಮನೆತನದೊಂದಿಗೆ ಸಂಬಂಧ ಹೊಂದಿರುತ್ತದೆ. ಆದರೆ ಜಗತ್ತಿನ ದೃಷ್ಟಿಯಲ್ಲಿ ಧನ ಮತ್ತು ಸಂಪತ್ತಿಗೆ ಮಹತ್ವ ಕಲ್ಪಿಸಲಾಗುತ್ತದೆ. ಯಾರು ಅತ್ಯಧಿಕ ಧನ ಸಂಪತ್ತನ್ನು ಹೊಂದಿರುತ್ತಾನೋ ಆತನ ಕುಲಗೋತ್ರವೂ ಅತ್ಯುತ್ಕೃಷ್ಟ ವಾಗಿರುತ್ತದೆ. ಗೌರವ ಮತ್ತು ಶ್ರೇಷ್ಠತೆಯು ಬೇರೆಯೇ ಆಗಿದೆ. ದೇವಭಯ ಮತ್ತು ಧರ್ಮನಿಷ್ಠೆಯಿಂದ ಅದು ಉಂಟಾಗುತ್ತದೆ. ಅಬೂಹುರೈರಾ(ರ) ಅವರು

ವರದಿ ಮಾಡಿದ ಒಂದು ಪ್ರವಾದಿ ವಚನದಲ್ಲಿ ಒಮ್ಮೆ ಪ್ರವಾದಿವರ್ಯರಲ್ಲಿ(ಸ) ಪ್ರಶ್ನಿಸುತ್ತಾರೆ, 'ಯಾರು ಜನರ ಪೈಕಿ ಅತ್ಯಂತ ಶ್ರೇಷ್ಠರು' ಅದಕ್ಕೆ ಉತ್ತರವಾಗಿ ಪ್ರವಾದಿವರ್ಯರು(ಸ) 'ಅವರ ಪೈಕಿ ಅತೀ ಹೆಚ್ಚು ದೇವಭಯವುಳ್ಳವರು' ಎಂದರು. ಆಗ ಸಹಾಬಿಗಳು ಅವರೊಂದಿಗೆ ಹೇಳಿದರು, 'ನಾವು ಬೇರೆಯೇ ಒಂದು ವಿಚಾರವನ್ನು ಕೇಳಬಯಸಿದ್ದೆವು' ಆದಕ್ಕೆ ಪ್ರವಾದಿವರ್ಯರು(ಸ) ನೀವು ಕುಲ ಗೋತ್ರಗಳ ಕುರಿತು ಕೇಳಬೇಕೆಂದಿದ್ದಿರೇನು? ಈ ವಿಚಾರದಲ್ಲಿ ಎಲ್ಲರಿಗಿಂತಲೂ ಶ್ರೇಷ್ಠರು ಪ್ರವಾದಿ ಯೂಸುಫ್(ಅ) ಆಗಿರುತ್ತಾರೆ. ಕಾರಣ ಯೂಸುಫ್ ಸ್ವತಃ ಓರ್ವ ಪ್ರವಾದಿಯಾಗಿದ್ದರು. ಅವರ ತಂದೆ (ಯಾಕೂಬ್) ಕೂಡಾ ಪ್ರವಾದಿ ಯಾಗಿದ್ದರು, ಅವರೂ ಓರ್ವ ಪ್ರವಾದಿ ಇಸ್‌ಹಾಕ್‌ರ(ಅ) ಪುತ್ರರಾಗಿದ್ದರು. ಇಸ್‌ಹಾಕರು ಇನ್ನೋರ್ವ ಪ್ರವಾದಿ ಇಬ್ರಾಹೀಮ್‌ರ(ಅ) ಪುತ್ರರಾಗಿದ್ದರು- ಈ ಪ್ರವಾದಿ ವಚನದಿಂದ ಕುಲಗೋತ್ರಗಳ ಶ್ರೇಷ್ಠತೆಗೂ ಸಹ ದೇವಭಯವೇ ಮೂಲ ಕಾರಣವಾಗಿದೆಯೆಂದು ತಿಳಿದು ಬರುತ್ತದೆ. ಅಲ್ಲಾಹನ ಪ್ರವಾದಿಗಳು ಆತನನ್ನು ಹೆಚ್ಚು ಹೆದರುವವರೂ ಆತನಲ್ಲಿ ಭಯಭಕ್ತಿಯುಳ್ಳವರೂ ಆಗಿರುತ್ತಾರೆ. ಪ್ರವಾದಿ ಯೂಸುಫರು ಸ್ವತಃ ಪ್ರವಾದಿಯಾಗಿದ್ದರು. ಅವರ ಹಿಂದಿನ ಮೂರು ತಲೆಮಾರಿ ನವರೂ ಮಹಾನ್ ಪ್ರವಾದಿಗಳಾಗಿದ್ದರು. ಆಗ ಸಹಾಬಿಗಳು, 'ಇದೂ ಸಹ ನಮ್ಮ ಇಂಗಿತವಾಗಿರಲಿಲ್ಲ'ವೆಂದರು. ಪ್ರವಾದಿವರ್ಯರು(ಸ) ಹೇಳಿದರು, ಪ್ರಾಯಶಃ ನೀವು ಅರೇಬಿಯಾದ ಖನಿಜ ಸಂಪತ್ತಿನ ಕುರಿತು ಪ್ರಶ್ನಿಸುತ್ತಿದ್ದೀರಿ. ಹಾಗಾದರೆ ಕೇಳಿರಿ, ಯಾರು ಅಜ್ಞಾನ ಕಾಲದಲ್ಲಿ ಶ್ರೇಷ್ಠನಾಗಿದ್ದಾನೋ ಆತ ಇಸ್ಲಾಮಿನಲ್ಲೂ ಶ್ರೇಷ್ಠ ನಾಗಿರುತ್ತಾನೆ. ಆದರೆ ಒಂದು ನಿಬಂಧನೆ, ಆತನು ಇಸ್ಲಾಮಿನ ತಿಳುವಳಿಕೆಯನ್ನು ಬೆಳೆಸಿಕೊಂಡಿರಬೇಕು. (ಬುಖಾರಿ, ಮುಸ್ಲಿಮ್)

ಇಲ್ಲಿಯೂ ಪ್ರವಾದಿವರ್ಯರು(ಸ) ಕುಲಗೋತ್ರದ ಇಸ್ಲಾಮಿ ತಿಳುವಳಿಕೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿರುವುದು ಗಮನಾರ್ಹ. ನಿನ್ನೆ ಯಾರು ತನ್ನ ಪ್ರತಿಭೆ ಮತ್ತು ಸಾಮರ್ಥ್ಯಗಳಲ್ಲಿ ಉತ್ತಮರಾಗಿದ್ದಾರೋ ಅವರು ಇಂದೂ ಉತ್ತಮರಾಗಿಯೇ ಪರಿಗಣಿಸಲ್ಪಡುತ್ತಾರೆ. ಆದರೆ ಆತ ಸಾಕಷ್ಟು ಧಾರ್ಮಿಕ ಜ್ಞಾನವನ್ನು ಹೊಂದಿರಬೇಕು.

ತಮ್ಮ ಕುಲ ಮಹಿಮೆಯ ಬಗ್ಗೆ ಹೆಮ್ಮೆ ಪಡುವುದು ಮತ್ತು ಅನ್ಯರ ಕುಲವಂಶವನ್ನು ತೆಗಳುವುದು, ಇವೆರಡೂ ತಪ್ಪು, ಕುಂದು ಕೊರತೆಗಳು ಎಲ್ಲರಲ್ಲೂ ಇರುತ್ತದೆ. ಯಾರೂ ನಿಷ್ಕಳಂಕರಾದವರಿಲ್ಲ, ಆದರೆ ಪರಿಪೂರ್ಣತೆ ತಕ್ವಾ(ದೇವ ಭಯ)ಕ್ಕೆ ಮಾತ್ರ ಒದಗುವುದು. ಹ. ಉತ್ಬಾ ಬಿನ್ ಆಮಿರ್(ರ) ಅವರ ವರದಿ- ಪ್ರವಾದಿ(ಸ) ಹೇಳಿದರು,

'ನಿಸ್ಸಂಶಯವಾಗಿಯೂ ನಿಮ್ಮ ವಂಶವು ಇತರರನ್ನು ನಿಂದಿಸುವ ಸಲುವಾಗಿರುವುದಲ್ಲ, ನಿಮ್ಮ ಪೈಕಿ ಎಲ್ಲರೂ ಆದಮರ ಮಕ್ಕಳು. ಅಳತೆಯ ಕೊರತೆಯನ್ನು ಯಾವ ರೀತಿ ನೀವು ತುಂಬದೆ ಬಿಡುತ್ತೀರೋ ಅದೇ ರೀತಿ (ಎಲ್ಲರಲ್ಲೂ ನ್ಯೂನತೆಯಿದೆ.) ತಕ್ವಾದ(ದೇವ ಭಯದ) ಹೊರತು ಇತರ ಯಾವುದೇ ಕಾರಣದಿಂದ ಯಾರಿಗೂ ಮೇಲ್ಮೆ ಇಲ್ಲ, ಒಬ್ಬ ವ್ಯಕ್ತಿ ನೀಚನಾಗಲು ಆತನ ಅಸಂಬದ್ಧ ನುಡಿ, ಜಿಪುಣತೆ ಮತ್ತು ದುಶ್ಶೀಲತೆಯು ಸಾಕಾಗುವುದು.' **(ಮುಸ್ನದ್ ಅಹ್ಮದ್)**

## ಸಂಪತ್ತಿನ ಮೇಲ್ಮೆಯ ಕುರಿತು ಒಂದು ವಿಮರ್ಶೆ

ಸಿರಿತನ ಮತ್ತು ಬಡತನದ ಬುನಾದಿಯಲ್ಲೂ ಮಾನವ ಸಮೂಹದ ವಿಂಗಡನೆಯಾಗಿದೆ. ಶ್ರೀಮಂತರು ಬಡವರನ್ನು ಅಧೀನಗೊಳಿಸಿದರು, ದಯನೀಯವಾಗಿ ಅವರನ್ನು ಆಳಿಸಿ ಹಾಕಿದರು. ಕ್ರಮೇಣ ಜಾಗೀರುದಾರರ ಮತ್ತು ಕಾರ್ಮಿಕರ ಎರಡು ಸ್ವತಂತ್ರ ವರ್ಗಗಳು ಅಸ್ತಿತ್ವಕ್ಕೆ ಬಂದವು. ಅವರ ಮಧ್ಯೆ ಸಂಘರ್ಷ ಆರಂಭವಾಯಿತು. ಇಂದು ಈ ಸಂಘರ್ಷವು ಪರಾಕಾಷ್ಠೆಗೆ ತಲುಪಿ ಬಿಟ್ಟಿದೆ. ಬಂಡವಾಳಶಾಹಿಗಳು ಕಾರ್ಮಿಕರಿಂದ ದುರ್ಲಾಭವನ್ನು ಪಡೆಯುತ್ತಿದ್ದರೆ, ಕಾರ್ಮಿಕರು ಮಾಲಿಕರಲ್ಲಿ ತಮ್ಮ ಹಕ್ಕಿಗಿಂತ ಹೆಚ್ಚಿನ ಬೇಡಿಕೆಯನ್ನು ಮುಂದಿಡುತ್ತಿದ್ದರು. ಇಷ್ಟಕ್ಕೆ ಕೊನೆಗೊಳ್ಳದೆ ಇದು ಕ್ರಮೇಣ ಜನರ ಆರ್ಥಿಕ ಸ್ಥಿತಿಗತಿಯನ್ನು ಅಳೆಯುವ ಮಾನದಂಡವಾಗಿ ಪರಿಣಮಿಸಿತು. ಕೇವಲ ತಮ್ಮ ಬಂಡವಾಳ ನಿಮಿತ್ತ ಮಜಾ ಉಡಾಯಿಸುವ ಮಾಲಿಕರು ಸಮಾಜದಲ್ಲಿ ಘನತೆ-ಗೌರವದ ಸ್ಥಾನವನ್ನು ಅಲಂಕರಿಸಿಕೊಂಡರು. ತಮ್ಮ ಹೊಟ್ಟೆಪಾಡಿಗಾಗಿ ದುಡಿಯುತ್ತಿರುವ ಕಾರ್ಮಿಕರು

ನಿಂದ್ಯರೂ ನಿಕೃಷ್ಟರೂ ಆಗಿ ಪರಿಗಣಿಸಲ್ಪಟ್ಟರು. ಇಸ್ಲಾಮ್ ಈ ಉಭಯ ಪ್ರಕ್ರಿಯೆ ಯನ್ನು ಕೊನೆಗೊಳಿಸಿ ಬಿಟ್ಟಿತು. ಒಂದೆಡೆ ಇಸ್ಲಾಮ್ ಬಡತನದ ಸಮಸ್ಯೆಯನ್ನು ಪರಿಹರಿಸಿತು. ಶ್ರೀಮಂತರ ಧನದಲ್ಲಿ ಬಡವರ ಹಕ್ಕನ್ನು ನಿರ್ಣಯಿಸಿತು. ಸಂಪತ್ತು ಕೂಡಿ ಹಾಕುವ ಮತ್ತು ಅದನ್ನು ಖರ್ಚು ಮಾಡುವ ನಿಟ್ಟಿನಲ್ಲಿ ನೈತಿಕ ನಿಯಮ ಗಳನ್ನಿರಿಸಿತು. ಹೊಟ್ಟೆಪಾಡಿಗಾಗಿ ದುಡಿದು ತಿನ್ನುವಂತೆ ಪ್ರೇರೇಪಿಸಿತು. ಈ ನಿಟ್ಟಿನಲ್ಲಿ ಧರ್ಮ ಸಮ್ಮತವಾದ ಮೂಲಗಳನ್ನು ಅರಸಲು ನೆರವು ನೀಡಿತು. ದುಡಿದು ತಿನ್ನಲು ಅಶಕ್ತರಾದವರ ಸಂರಕ್ಷಣೆಯ ಭಾರವನ್ನು ಅದು ವಹಿಸಿಕೊಂಡಿತು. ಇನ್ನೊಂದೆಡೆ ಅದು ಆಸ್ತಿ-ಅಂತಸ್ತುಗಳು ಶ್ರೇಷ್ಠತೆಯ ಮಾನದಂಡವಲ್ಲವೆಂದು ಬಹಿರಂಗವಾಗಿ ಸಾರಿತು. ಜಗತ್ತು ಅದನ್ನು ಶ್ರೇಷ್ಠತೆಯ ಮಾನದಂಡವಾಗಿ ಮಾಡಿ ಕೊಂಡಿದ್ದರೆ ಅದು ತಪ್ಪು, ಅದು ಆ ಮಾನದಂಡವನ್ನು ತೊರೆಯಬೇಕು. ಅಂತಿಮ ದಿನದಂದು ಅಲ್ಲಾಹನು ಜನರ ಕರ್ಮವನ್ನು ನೋಡುತ್ತಾನೆಯೇ ಹೊರತು ಆತನ ಬಂಡವಾಳವನ್ನಲ್ಲ, ಅಂದು ಯಾರ ಕರ್ಮವು ಒಳಿತಾಗಿರುವುದೋ ಅವನು ಮಾತ್ರ ಯಶಸ್ಸು ಹೊಂದುವನು. ದುಃಸ್ವಭಾವಿಗಳಿಗೆ ಅಲ್ಲಾಹನ ಹಿಡಿತದಿಂದ ಯಾರೂ ಮುಕ್ತಿ ನೀಡಲಾರರು.

"ನಿಮ್ಮನ್ನು ನಮಗೆ ನಿಕಟಗೊಳಿಸುವ ಸಾಧನ ನಿಮ್ಮ ಸಂಪತ್ತಾಗಲೀ ನಿಮ್ಮ ಸಂತಾನವಾಗಲೀ ಅಲ್ಲ. ಯಾರು ಸತ್ಯವಿಶ್ವಾಸ ಸ್ವೀಕರಿಸಿ ಸತ್ಕರ್ಮವೆಸಗುವರೋ ಅವರು ಇದಕ್ಕೆ ಹೊರತಾಗಿರುವರು. ಅವರಿಗೆ ಅವರ ಕರ್ಮದ ಇಮ್ಮಡಿ ಪ್ರತಿಫಲ ಇದೆ ಮತ್ತು ಅವರು ಅತ್ಯುನ್ನತ ಭವನಗಳಲ್ಲಿ ನಿಶ್ಚಿಂತರಾಗಿರುವರು. ಇನ್ನು ನಮ್ಮ ಸೂಕ್ತಗಳನ್ನು ಕೀಳಾಗಿಸಲಿಕ್ಕಾಗಿ ಶ್ರಮಿಸುವವರು ಅವರು ಯಾತನೆಗೊಳಗಾಗುವರು."

(ಪವಿತ್ರ ಕುರ್‌ಆನ್, 34:37-38)

ನಾಯಕತ್ವದ ಅರ್ಹತೆಗೂ ಆಸ್ತಿ-ಅಂತಸ್ತು ಮಾನದಂಡವಾಗಿತ್ತು. ಯಾರ ಬಳಿ ಸಂಪತ್ತಿನ ಕೀಲಿಗೈಯಿತ್ತೋ ಅವರು ಬಡಪಾಯಿ ಜನ ಸಾಮಾನ್ಯರ ಮೇಲೆ ದಬ್ಬಾಳಿಕೆ ನಡೆಸಿದರು. ಅವರೊಡನೆ ಪ್ರಾಣಿಗಳಿಗಿಂತಲೂ ಹೀನಾಯವಾಗಿ ವರ್ತಿಸಿದರು.

ಇಸ್ಲಾಮ್ ಈ ಮಾನದಂಡವನ್ನು ತೊಡೆದು ಹಾಕಿತು. ಪವಿತ್ರ ಕುರ್‌ಆನ್ ಒಂದೆಡೆ ಬನೀ ಇಸ್ರಾಈಲರ ಘಟನೆಯೊಂದನ್ನು ವಿವರಿಸುತ್ತಾ ಒಂದು ವಾಸ್ತವಿಕತೆ ಯೆಡೆಗೆ ಗಮನ ಸೆಳೆಯುತ್ತದೆ. ಕೇವಲ ಆಸ್ತಿ ಅಂತಸ್ತು ಹೊಂದಿದ ಮಾತ್ರಕ್ಕೆ ಒಬ್ಬನು ನಾಯಕತ್ವಕ್ಕೆ ಅರ್ಹನಾಗುವುದಿಲ್ಲ, ಆ ಕಾರ್ಯಕ್ಕೆ ಅಪಾರ ಬುದ್ಧಿಶಕ್ತಿಯ ಹಾಗೂ ಶಾರೀರಿಕ ಸಾಮರ್ಥ್ಯದ ಅಗತ್ಯವಿದೆ. ಒಮ್ಮೆ ಬನೀ ಇಸ್ರಾಯೀಲರು ತಮ್ಮ ಪ್ರವಾದಿಯೊಂದಿಗೆ ಹೇಳಿದರು, ನಾವು ನಮ್ಮ ವಿರೋಧಿಗಳಾದ 'ಅಮಾಲಿಕ್' ರೊಂದಿಗೆ ಹೋರಾಡಲಿದ್ದೇವೆ. ನಮ್ಮ ಪೈಕಿ ಒಬ್ಬನನ್ನು ನೀವು ನಮ್ಮ ನಾಯಕನಾಗಿ ಆರಿಸಿರಿ. ಆ ಪ್ರವಾದಿಯು ತಾಲೂತ್ ಗೋತ್ರಕ್ಕೆ ಸೇರಿದ ಪ್ರತಿಭಾವಂತ ವ್ಯಕ್ತಿ ಯೊಬ್ಬನನ್ನು ಆರಿಸಿದರು. ಇದರಿಂದ ಇಡೀ ಜನಾಂಗದಲ್ಲೇ ಆಕ್ರೋಶ ಉಕ್ಕೇರಿತು. ಅವರು ಹೇಳಿದರು,

"ಅವನು ನಮ್ಮ ಅರಸನಾಗಲು ಹಕ್ಕುದಾರನಾದುದು ಹೇಗೆ? ಅರಸುತನದ ಅರ್ಹತೆಯನ್ನು ಅವನಿಗಿಂತ ಹೆಚ್ಚು ನಾವು ಹೊಂದಿರುತ್ತೇವೆ. ಅವನೊಬ್ಬ ದೊಡ್ಡ ಶ್ರೀಮಂತನೂ ಅಲ್ಲ." (ಪವಿತ್ರ ಕುರ್‌ಆನ್, 2:247)

ಆ ಪ್ರವಾದಿಯು ಇವರ ಮೂರ್ಖತನದ ಮಾತನ್ನು ಆಲಿಸಿದ ನಂತರ ಹೇಳೀದರು,

"ಅಲ್ಲಾಹನು ನಿಮಗೆ ಬದಲಾಗಿ ಅವನನ್ನು ಆಯ್ಕೆ ಮಾಡಿರುತ್ತಾನೆ ಮತ್ತು ಅವನಿಗೆ ಬೌದ್ಧಿಕ ಹಾಗೂ ಶಾರೀರಿಕ ಶಕ್ತಿ ಸಾಮರ್ಥ್ಯಗಳನ್ನು ಅತ್ಯಧಿಕವಾಗಿ ನೀಡಿರುತ್ತಾನೆ. ತನ್ನ ಸಾಮ್ರಾಜ್ಯದ ಅಧಿಕಾರವನ್ನು ತನಗಿಷ್ಟ ಬಂದವರಿಗೆ ಕೊಡುವ ಅಧಿಕಾರ ಅಲ್ಲಾಹನಿಗಿದೆ. ಅಲ್ಲಾಹನು ಅತಿ ವಿಶಾಲನೂ ಸರ್ವಜ್ಞನೂ ಆಗಿರುತ್ತಾನೆ ಎಂದುತ್ತರಿಸಿದರು." (ಪವಿತ್ರ ಕುರ್‌ಆನ್, 2:247)

ಅರ್ಥಾತ್, ತಾಲೂತ್ ಗೋತ್ರದವರು ಆರ್ಥಿಕವಾಗಿ ಬಹಳ ಹಿಂದುಳಿದವ ರಾಗಿದ್ದರು. ಆದರೆ ಅವರು ಕ್ರಿಯಾಶೀಲರೂ ಉತ್ತಮ ತಿಳುವಳಿಕೆಯುಳ್ಳವರೂ ಆಗಿದ್ದರು. ಅಲ್ಲಾಹನ ಬಳಿ ಸ್ವೀಕೃತವಾಗುವ ಗುಣಗಳು ಇದುವೇ ಆಗಿರುತ್ತದೆ.

ಆದುದರಿಂದ ಅವರೇ ನಾಯಕತ್ವಕ್ಕೆ ಅರ್ಹರಾಗಬೇಕಿತ್ತು. ಅವರ ನಾಯಕತ್ವವನ್ನು ಅಂಗೀಕರಿಸದೇ ಇರಲು ಅಲ್ಲಿ ಯಾವ ಕಾರಣವೂ ಇರಲಿಲ್ಲ.

ಅಲ್ಲಾಹನ ಬಳಿ ಆಸ್ತಿ ಅಂತಸ್ತುಗಳಿಗೆ ಯಾವುದೇ ರೀತಿಯ ಮಹತ್ವವಿಲ್ಲ, ಮಹತ್ವವಿರುವುದು ದೇವಭಯ ಮತ್ತು ಉತ್ತಮ ಸ್ವಭಾವಗಳಿಗೆ ಮಾತ್ರವೆಂಬ ವಿಚಾರವು ಹದೀಸ್‌ಗಳಲ್ಲಿ ಬಂದಿದೆ. ಹ. ಸಅದ್ ಬಿನ್ ಸಾಇದೀ(ರ) ಹೇಳುತ್ತಾರೆ., 'ಒಮ್ಮೆ ಪ್ರವಾದಿ ಮುಹಮ್ಮದ್(ಸ) ಅವರು ತಮ್ಮ ಸಂಗಾತಿಗಳೊಂದಿಗಿರಲು ಉತ್ತಮ ವೇಷ ಭೂಷಣಗಳನ್ನು ಧರಿಸಿದ ವ್ಯಕ್ತಿಯೋರ್ವ ಆ ದಾರಿಯಾಗಿ ಹಾದು ಹೋದನು. ಪ್ರವಾದಿ(ಸ) ಸಂಗಾತಿಗಳೊಂದಿಗೆ, ಹೋದ ವ್ಯಕ್ತಿಯ ಕುರಿತು ಅಭಿಪ್ರಾಯ ಕೇಳಿದರು.' ಓರ್ವ ಸಹಾಬಿ ಹೇಳಿದರು, 'ಆ ವ್ಯಕ್ತಿ ಅರಬ್ ಮುಖಂಡನಂತೆ ತೋರುತ್ತಾನೆ. ಆತನು ವಿವಾಹ ಪ್ರಸ್ತಾಪವನ್ನು ಮುಂದಿಟ್ಟರೆ ಆತನ ವಿವಾಹವು ನೆರವೇರಬಹುದು. ಇನ್ನು ಆತನು ಯಾರಿಗಾದರೂ ಶಿಫಾರಸು ಮಾಡಿದರೆ ಆತನ ಶಿಫಾರಸು ಸ್ವೀಕೃತವಾಗಬಹುದು.' ಸ್ವಲ್ಪ ಹೊತ್ತಿನ ನಂತರ ಇನ್ನೋರ್ವ ಬಡಕಲಾದ ವ್ಯಕ್ತಿ ಹಾದು ಹೋದನು. ಈಗ ಆತನ ಕುರಿತು ಪ್ರವಾದಿವರ್ಯರು(ಸ) ಸಂಗಾತಿ ಗಳಲ್ಲಿ ಅಭಿಪ್ರಾಯ ಕೇಳಿದರು. ಸಹಾಬಿಯೋರ್ವರು ಉತ್ತರಿಸಿದರು, ಹಾದು ಹೋದ ವ್ಯಕ್ತಿ ಬಡಪಾಯಿ ಮುಸ್ಲಿಮನಂತೆ ಕಾಣುತ್ತಾನೆ. ಆತನು ವಿವಾಹ ಪ್ರಸ್ತಾಪವನ್ನು ಮುಂದಿಟ್ಟರೆ ಆತನ ವಿವಾಹ ಬಯಕೆ ನೆರವೇರದು. ಇನ್ನು ಆತನು ಯಾರಿಗಾದರೂ ಶಿಫಾರಸು ಮಾಡಿದರೆ ಅದೂ ಸ್ವೀಕೃತವಾಗಲಾರದು. ಇದನ್ನು ಆಲಿಸಿದ ಪ್ರವಾದಿವರ್ಯರು(ಸ) ಹೇಳಿದರು, ಯಾರನ್ನು ನೀವು ಅರಬ್ ಮುಖಂಡ ನೆಂದು ಗುರುತಿಸಿದಿರೋ ಅಂತಹ ಜನರಿಂದ ಭೂಮಿ ತುಂಬಿದರೂ ಈ ಬಡ ಮುಸ್ಲಿಮನು ಅವರಿಗಿಂತ ಶ್ರೇಷ್ಠನಾಗಿರುವನು.

ಅಬೂಹುರೈರಾ(ರ) ವರದಿ ಮಾಡಿರುವ ಹದೀಸೊಂದರಲ್ಲಿ ಈ ರೀತಿಯಿದೆ,

ಪ್ರವಾದಿವರ್ಯರು(ಸ) ಹೇಳಿದರು, 'ಅಲ್ಲಾಹನು ನಿಮ್ಮ ರೂಪವನ್ನಾಗಲಿ, ನಿಮ್ಮ ಸಂಪತ್ತನ್ನಾಗಲಿ ನೋಡುವುದಿಲ್ಲ, ಅವನು ನೋಡುವುದು ನಿಮ್ಮ ಮನಸ್ಸು ಮತ್ತು ನಿಮ್ಮ ಕರ್ಮಗಳನ್ನು ಮಾತ್ರ.'

(ಮುಸ್ಲಿಮ್, ಕಿತಾಬುಲ್ ಬಿರ್ರ್ ವಸ್ಸಿಲತ್, ಬಾಬುತ್ತಹ್‌ರೀಮ್)

## ತಕ್ವಾದ ಅರ್ಥ ವೈಶಾಲ್ಯ

ಸತ್ಯವಿಶ್ವಾಸ ಮತ್ತು ದೇವಭಯವು ಶ್ರೇಷ್ಠತೆಯ ಮಾನದಂಡವೆಂದು ಪ್ರವಾದಿ ವರ್ಯರು(ಸ) ಹೇಳಿರುವರು. ಅಲ್ಲಾಹನು ಅದನ್ನು ಮಾತ್ರ ನೋಡುತ್ತಾನೆ. ತಕ್ವಾ (ದೇವಭಯ) ಎಂಬ ಪದವು ವಿಶಾಲ ಅರ್ಥವನ್ನು ಹೊಂದಿದೆ. ದೇವನ ಕುರಿತು ಸರಿಯಾದ ತಿಳುವಳಿಕೆಯಿರುವುದು, ಆತನ ಆಜ್ಞೆಗಳಿಗೆ ವಿಧೇಯನಾಗುವುದು, ಆತನ ದಾಸರ ಹಕ್ಕುಗಳನ್ನು ಪಾಲಿಸುವುದು, ಒಳಿತನ್ನು ಸಂಸ್ಥಾಪಿಸುವುದು ಮತ್ತು ಕೆಡುಕನ್ನು ತಡೆಯುವುದೇ ಮೊದಲಾದುವುಗಳು ತಕ್ವಾದಲ್ಲಿ ಸೇರಿದೆ. ಇನ್ನು ಕೆಲವು ಪ್ರವಾದಿ ವಚನಗಳಲ್ಲಿ ಈ ಪೈಕಿ ಪ್ರತಿಯೊಂದನ್ನು ಬೇರೆ ಬೇರೆಯಾಗಿ ವಿವರಿಸ ಲಾಗಿದೆ. ದುರ್ರ಼ಃ ಬಿನ್ತಿ ಅಬೀ ಲಹಬ್ ಪ್ರವಾದಿವರ್ಯರಲ್ಲಿ(ಸ) 'ಜನರ ಪೈಕಿ ಶ್ರೇಷ್ಠರು ಯಾರು?' ಎಂದು ಕೇಳಿದರು. ಪ್ರವಾದಿವರ್ಯರು(ಸ) ಹೇಳಿದರು, ಅಲ್ಲಾಹನ ಗ್ರಂಥವನ್ನು ಹೆಚ್ಚು ಪಠಿಸುವ, ಅಲ್ಲಾಹನನ್ನು ಅತ್ಯಧಿಕ ಹೆದರುವ ಒಳಿತನ್ನು ಸಂಸ್ಥಾಪಿಸುವ ಮತ್ತು ಕೆಡುಕನ್ನು ವಿರೋಧಿಸುವ ಹಾಗೂ ಎಲ್ಲರಿ ಗಿಂತಲೂ ಹೆಚ್ಚಾಗಿ ಕುಟುಂಬ ಸಂಬಂಧವನ್ನು ಬೆಸೆಯುವವನಾರೋ ಆತನೇ ಜನರ ಪೈಕಿ ಶ್ರೇಷ್ಠನಾದವನು.

(ಮುಸ್ನದ್ ಅಹ್ಮದ್)

ಈ ಗುಣಗಳು ಜನರನ್ನು ಶ್ರೇಷ್ಠತೆ ಮತ್ತು ಗೌರವಾದರಗಳಿಗೆ ಅರ್ಹನನ್ನಾಗಿ ಮಾಡುತ್ತವೆ. ಈ ಗುಣಗಳನ್ನು ಮೈಗೂಡಿಸಿಕೊಂಡವರಿಗೆ ಮಾತ್ರ ಪ್ರವಾದಿ(ಸ) ಅವರ ಬಳಿ ಗೌರವಾರ್ಹ ಸ್ಥಾನ ಸಿಗುತ್ತಿತ್ತು. ತಕ್ವಾ(ದೇವಭಯ)ದ ಹೊರತು ಇತರ ಎಲ್ಲವೂ ಪ್ರವಾದಿವರ್ಯರ(ಸ) ದೃಷ್ಟಿಯಲ್ಲಿ ನಿಕೃಷ್ಟವಾಗಿತ್ತೆಂದು ಆಯಿಶಾ(ರ) ಹೇಳುತ್ತಾರೆ.

ಪ್ರವಾದಿವರ್ಯರು(ಸ) ಜಗತ್ತಿನ ಯಾವುದೇ ವಸ್ತು ಅಥವಾ ಯಾವುದೇ ಒಬ್ಬ ವ್ಯಕ್ತಿಯಿಂದ ಆಕರ್ಷಿತರಾಗಲಿಲ್ಲ, ಆಕರ್ಷಿತರಾಗಿದ್ದರೆ ದೇವಭಯವಿರಿಸಿದ ವ್ಯಕ್ತಿಯಿಂದ ಮಾತ್ರ. (ಮುಸ್ನದ್ ಅಹ್ಮದ್)

## ಕೊನೆಯ ಮಾತು

ಮಾನವರೆಲ್ಲರೂ ಒಂದೇ ಕುಟುಂಬದ ಸದಸ್ಯರು. ಕಡ್ಡಾಯವಾಗಿ ಎಲ್ಲರೂ ಆ ದೇವನ ದಾಸ್ಯ-ಆರಾಧನೆಯನ್ನು ಮಾಡಬೇಕು. ಮನುಷ್ಯರೆಲ್ಲರೂ ಈ ಒಂದು ಉದ್ದೇಶಾರ್ಥ ಮಾತ್ರವೇ ಸೃಷ್ಟಿಸಲ್ಪಟ್ಟವರು. ದೇವನ ದೃಷ್ಟಿಯಲ್ಲಿ ಒಬ್ಬ ಶ್ರೇಷ್ಠ ಇನ್ನೊಬ್ಬ ನಿಕೃಷ್ಟ ಎಂದಿಲ್ಲ, ಆತನ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ಮಾನವ ಸಮಾಜದಲ್ಲಿ ವರ್ಣ, ಭಾಷೆ ಮತ್ತು ಕೋಮಿನ ಆಧಾರದಲ್ಲಿರುವ ಭಿನ್ನತೆಗಳಾವುದೂ ವಾಸ್ತವಿಕವಲ್ಲ, ಅವುಗಳಲ್ಲಿ ಕೆಲವು ಸ್ವಾರ್ಥ ಕಾರಣಗಳಿಂದ ಜನ್ಮತಾಳಿದವುಗಳಾಗಿವೆ. ಅಂತಿಮ ದಿನದಲ್ಲಿ ಜನರ ಜಯಾಪಜಯಗಳನ್ನು ಇಂತಹ ಕ್ಷುಲ್ಲಕ ಕಾರಣಗಳ ಆಧಾರದಲ್ಲಿ ನಿರ್ಣಯಿಸಲಾಗುವುದಿಲ್ಲ. ಒಬ್ಬನ ವಿಶ್ವಾಸ(ಈಮಾನ್) ಮತ್ತು ಕರ್ಮವನ್ನು (ಅಮಲ್) ನೋಡಿ ನಿರ್ಣಯಿಸಲಾಗುತ್ತದೆ. ಈ ಲೋಕದಲ್ಲಿ ಯಾರು ತನ್ನ ಬದುಕಿನಲ್ಲಿ ದೇವಭಯವನ್ನು ಬೆಳೆಸಿಕೊಂಡು ಸತ್ಕರ್ಮಗಳನ್ನು ಎಸಗುತ್ತಾ ಸದಾ ದೇವನಿಗೆ ವಿಧೇಯರಾಗಿರುತ್ತಾರೋ ಅವರು ಮಾತ್ರ ಯಶಸ್ಸು ಹೊಂದುವರು. ಈ ಗುಣಗಳಿಂದ ವಂಚಿತರಾದವರು ನರಕಾಗ್ನಿಗೆ ಎಸೆಯಲ್ಪಡುವರು. ಅಲ್ಲಿ ಅವರನ್ನು ಯಾರೂ ರಕ್ಷಿಸಲಾರರು. ಅಂದು ಅವನ ಪಾಲಿಗೆ ನಿಂದ್ಯತೆಯೇ ಇರುವುದು.

ಇಸ್ಲಾಮ್ ಈ ರೀತಿಯಾಗಿ ಜನರಿಗೆ ಭರವಸೆಯನ್ನು ನೀಡುತ್ತದೆ. ಈ ಭರವಸೆಯು ಉಚ್ಚ-ನೀಚತೆಯ ಎಲ್ಲಾ ಪೊಳ್ಳು ಮಾನದಂಡಗಳನ್ನೂ ಕೊನೆಗೊಳಿಸುತ್ತದೆ. ಜನರು ತಮ್ಮೆಲ್ಲಾ ಭಿನ್ನತೆಗಳನ್ನು ಮರೆತು ಒಂದೇ ಸಾಲಿನಲ್ಲಿ ನಿಂತುಕೊಳ್ಳುತ್ತಾರೆ. ಕೇವಲ ಇದರ ಆಧಾರದಲ್ಲಿ ವಿವಿಧ ಜನಾಂಗ ಮತ್ತು ಗೋತ್ರಗಳನ್ನು ಒಟ್ಟುಗೂಡಿಸಲು ಸಾಧ್ಯವಿದೆ. ಇದರ ಹೊರತು ಐಕ್ಯದ ಬೇರೆ ಯಾವುದೇ ವಿಧಾನವಲ್ಲ, ಜಗತ್ತು ಇದಕ್ಕೆ ಸಿದ್ಧವಾದೀತೆ? ಭವಿಷ್ಯದಿಂದಲೇ ಇದರ ಉತ್ತರವನ್ನು ನಿರೀಕ್ಷಿಸಬಹುದು.